## ಲೇಖಕರಿಗೆ ಸೂಚನೆಗಳು

* ಸಾಧನೆಯಲ್ಲಿ ಸ್ವತಂತ್ರ ಹಾಗೂ ಅನುವಾದಿತ ಲೇಖನಗಳನ್ನು ಪ್ರಕಟಿಸಲಾಗುವುದು. ಲೇಖನ ಅನುವಾದವಾಗಿದ್ದರೆ ಮೂಲ ಲೇಖಕರ ಅಥವಾ ಪ್ರಕಾಶಕರ ಸಮ್ಮತಿಯನ್ನು ಲೇಖನದೊಂದಿಗೆ ಕಳುಹಿಸಬೇಕು.
* ಲೇಖನಗಳನ್ನು ಕಾಗದದ ಒಂದೇ ಬದಿಯಲ್ಲಿ ಸ್ಪಷ್ಟವಾಗಿ ಬರೆದಿರಬೇಕು ಅಥವಾ ಬೆರಳಚ್ಚು ಮಾಡಿರಬೇಕು.
* ಲೇಖನದ ವಿಷಯಕ್ಕೆ ಪೂರಕವಾಗಿ ಚಿತ್ರಗಳನ್ನು ಪ್ರಕಟಿಸಬೇಕಿದ್ದರೆ, ಚಿತ್ರಗಳನ್ನು ಇಂಡಿಯನ್ ಕಪ್ಪು ಇಂಕಿನಲ್ಲಿ ಬರೆಸಿ ಕಳುಹಿಸಬೇಕು.
* ಸ್ವೀಕೃತವಾಗದ ಲೇಖನವನ್ನು ಹಿಂದಕ್ಕೆ ಪಡೆಯಬಯಸುವವರು, ಸಾಕಷ್ಟು ಅಂಚೆಚೀಟಿ ಕಳುಹಿಸಿಕೊಡಬೇಕು.
* ಲೇಖನಗಳನ್ನು ಪ್ರಕಟಿಸುವ, ಬಿಡುವ ಅಥವಾ ಸ್ವಲ್ಪ ಬದಲಾವಣೆ ಮಾಡುವ ಸ್ವಾತಂತ್ರ್ಯ ಸಂಪಾದಕರಿಗೆ ಸೇರಿದೆ.
* ಲೇಖನಗಳನ್ನು ಪ್ರಧಾನ ಸಂಪಾದಕರು, ಸಾಧನೆ ಪತ್ರಿಕೆ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560 056 ಅವರ ವಿಳಾಸಕ್ಕೆ ಕಳುಹಿಸಬೇಕು.

SADHANE : Kannada Quarterly of the Bangalore University, Bangalore. Vol. 22 No. 3-4 July—December 1993



| | | |
|---|---|---|
| ವಾರ್ಷಿಕ ಚಂದಾ : | ರೂ. 15–00 | |
| ವಿದ್ಯಾರ್ಥಿಗಳಿಗೆ | ರೂ. 10–00 | (ದೃಢೀಕರಣ ಪತ್ರವನ್ನು ಕಳುಹಿಸಬೇಕು) |
| ಆಜೀವ ಸದಸ್ಯತ್ವ | ರೂ. 150–00 | |

ಪ್ರಕಾಶಕರು :
ಎಸ್. ಕೆಂಡಗಣ್ಣಸ್ವಾಮಿ
ನಿರ್ದೇಶಕ
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ, ಬೆಂಗಳೂರು

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ

# ಪರಿವಿಡಿ

# ಕವಿತೆ ಮತ್ತು ರೊಟ್ಟಿ

---

ದೊಡ್ಡ ರಂಗೇಗೌಡ

ಎಲ್ಲಿ ನೋಡಲಿ ಅಲ್ಲಿ ಕವಿತೆ
ಅವನ ಮನೆ ತುಂಬ ಕಾವ್ಯದ ಒರತೆ,
ಮನದಲ್ಲೂ ಅಷ್ಟೇ...ಇರಲಿಲ್ಲ ಇನಿತೂ ಕಲ್ಪನೆಯ ಕೊರತೆ.

ಅವನು ಕವಿ, ಅವನ ಬಾಳು ಆಗಿಲ್ಲ ಸವಿ
ಅವನ ಹೆಂಡತಿ ಭವಿ, ಅವಳ ಜೀವನವೆಲ್ಲಾ ಬೇವಿನ ಪಲ್ಲವಿ
ಆ ಬದುಕನೂ ಪಲ್ಲವಿಸಿ ಹೊಳೆ ಹೊಳೆದಿರಲಿಲ್ಲ
ಕವಿಯ ಪ್ರತಿಭಾ–ರವಿ

ಹೀಗಾಗಿ ಎಲ್ಲಿ ನೋಡಲಿ ಅಲ್ಲಿ ಕಾವ್ಯ ಕೃತಿ ಒಟ್ಟಿಲು
ಇಷ್ಟಾದರೂ ಕಟ್ಟಿರಲಿಲ್ಲ ಆ ಮನೆಯಲ್ಲಿ ತೊಟ್ಟಿಲು...!

ಎಷ್ಟೇ ಹುಡುಕಲಿ ಸಿಗದು ಆ ಮನೆಯಲ್ಲಿ ಕಾಳು
ಡಬ್ಬ ಡಬ್ಬವೂ ಬೋಳು,
ಅವಳ ಬಾಳೂ ಅಷ್ಟೇ...ನೀಲಾಕಾಶದಂತೆ ಬಣ ಬಣ ಬಣ...

ಅಲ್ಲಿಲ್ಲ ಉದಾಹರಣೆಗೂ ಒಂದು ತುಣುಕು ಮುಗಿಲು-
ಇಲ್ಲೂ ಅಷ್ಟೇ...ಮನೆಯುದ್ದಗಲ ಗೋಳು
ಗಂಡನಿಗೆ ಬರಿದೇ ಬರೆಯುವ ಗೀಳು
ಮನೆಯಲ್ಲದ ಮನೆ, ಅಲ್ಲಿ ಸೃಜನೆಗಿಲ್ಲ ಎಂದೂ ಕೊನೆ.

ಕವಿ ದೊಡ್ಡವ, ಅವನ ಕಾವ್ಯವೂ ದೊಡ್ಡದು
ಅವನ ಮನೆ ಬಡತನ ಅದಕ್ಕೂ ದೊಡ್ಡದು-

* * * *

ಅವನ ಕಾವ್ಯಾಭಿಮಾನಿಯೊಬ್ಬನ ಔದಾರ್ಯ
ಅವನ ಹೆಂಗರಳುತನದ ಕೃಪಾಕಟಾಕ್ಷ
ಕವಿಗೆ ತಲೆಯ ಮೇಲೊಂದು ಬಾಡಿಗೆ ಸೂರು ಲಭ್ಯ
ಇಲ್ಲವಾದಲ್ಲಿ ಇರಲಿಕ್ಕೆ ನೆಲೆಯೂ ಶೂನ್ಯ...

ಕವಿಯ ಕಾವ್ಯದ ತುಂಬ ಎಲ್ಲವೂ ಸಮೃದ್ಧ
ಅವನ ಬದುಕಿನ ಬಿಂಬ ಬರೆದ ಕೊರತೆಗಳ ಪಟ್ಟಿ ಊರುದ್ದ !

ಅವನಿಗೆ ಇಂದೇನೋ ವಿಪರೀತ ಹಸಿವು
ತಿನ್ನೋಣವೆಂದರೆ ಕವಿತೆ ರೊಟ್ಟಿಯಲ್ಲ
ಮಾರೋಣವೆಂದರೆ ಕವಿತೆ ಕೇಳುವವರಿಲ್ಲ...

ಕೊನೆಗೆ ಕಾಗದದ ಕಟ್ಟು ರದ್ದಿಯ ಸಮಾನ
ಅದೆಲ್ಲಾ ವಿಲೇವಾರಿ ಮಾಡಿದರೂ ಹುಟ್ಟದು ಹಿಟ್ಟು !

ಮಾರಲಿಕ್ಕೆ ಪಾತ್ರೆಯೂ ಇಲ್ಲ
ಎಲ್ಲ ಮಡಕೆ-ಕೊಳ್ಳುವವರಿಲ್ಲ !

ಹಿತ್ತಾಳೆಯೂ ಇಲ್ಲ, ಬೊಂಬಾಯಿ ಬೆಳ್ಳಿಯೂ ಇಲ್ಲ
ಕವಿಯ ಮನೆಯಲ್ಲಿ ಮಡಕೆಗಳೇ ಎಲ್ಲಾ...!

ಮಡಕೆ ಮಡಕೆಯೂ ಹೇಳಿಯಾವು ಕವಿಯ ನೋವಿನ ಕಾವ್ಯ
ಗೋಡೆ ಗೋಡೆಯೂ ಪಿಸುಗುಟ್ಟಿಯಾವು ದಾರುಣ ಕಾವ್ಯ ;

ಅಟ್ಟದಲ್ಲೂ ಕಡತ, ಪೆಟ್ಟಿಯಲ್ಲೂ ಕಡತ
ಕೊಟ್ಟಿಗೆಯಂಥ ಇಕ್ಕಟ್ಟಿನ ಕೋಣೆಯಲ್ಲೂ ಕಡತ
ರೊಟ್ಟಿಗೆ ಹಿಟ್ಟಿಲ್ಲದ್ದೇ ಕವಿಯ ಹೆಂಡತಿಯ ಧಾವಂತ-

ಕವಿ ಕೇಳುತ್ತಿದ್ದ ಶಕ್ತಿ ಶಾರದೆಯನ್ನ
ಮತ್ತೆ ಮತ್ತೆ ಬೇಡುತ್ತಿದ್ದ ಸೃಷ್ಟಿ ಸಂಪನ್ನತೆಯನ್ನ...

ಸದಾ ಅವನಲ್ಲಿದ್ದುದೊಂದೇ ಹುರುಡು
ಹೆಂಡತಿಯ ಮಾತಿಗೆ ಅವನದು ಜಾಣ ಕಿವುಡು,

ಅವಳು ಸಾಮಾನ್ಯ ಹೆಣ್ಣು-ಗೃಹಸ್ಥೆ ಮೊರೆಯಿಟ್ಟಳು ಲಕ್ಷ್ಮಿಗೆ
ಬೇಡಲಿಲ್ಲ ಹೆಚ್ಚಿಗೆ; ಬೇಡಿದ್ದಳು ಒಂದಿಷ್ಟು ಹೊಟ್ಟೆಗೆ-
ಲಕ್ಷ್ಮಿಗೋ ಶಾರದಾ ಪ್ರಿಯರ ಬಗ್ಗೆಯೇ ಅಸಡ್ಡೆ
ಕವಿಗೆ ಲೌಕಿಕವೆಲ್ಲಾ ಬರೀ ಗೊಡ್ಡೇ !

ಹಸಿವಿನಲ್ಲೂ ಕವಿ ಬರೆಯುತ್ತಿದ್ದ
ಅಗಣಿತ ಊಹೆಗಳಿಗೆ ಅನನ್ಯ ಶಬ್ದ ಶಿಲ್ಪ ಹುಡುಕುತ್ತಿದ್ದ
ಅವನ ಭಾವ ಬಾನ ತುಂಬ ಕಲ್ಪನೆಗಳ ಮುಗಿಲು
ಎಲ್ಲ ಬಗೆಯೂ ಅಲ್ಲಿ ಗುಡುಗು-ಸಿಡಿಲು
ಅನುಭವದ ಮಿಂಚು ಹೊಳೆಯಲು-
ಸ್ಫೂರ್ತಿ ನೀರಜಬಿಂದು ಮಳೆಯಾಗಿ ಇಳಿದು
ಅವನ ಹೃದಯ ಬುವಿಯು ತುಂಬ ಅನುಪಮ ಗೀತ ಹೊನಲು-
ಮನೆ ಮನ ತುಂಬೆಲ್ಲಾ ತುಂಬಿ ತುಳುಕಿತ್ತು ಸೃಷ್ಟಿಶೀಲ ಕಡಲು !

* * * *

ಹೊರಗೆ ಉರಿವ ಸೂರ್ಯ ತಂಪಾಗುತ್ತಿದ್ದ
ಒಳಗೆ ಕವಿಯ ಹೆಂಡತಿ ಹಸಿವಲ್ಲಿ ಬೆಂದು ಬವಳಿ
ಸೋತು ಸೊರಗಿ ಸುಸ್ತಾಗಿ ಗೋಡೆಗೊರಗಿ
ಕಂಗಾಲಾಗಿ ತೇಲುಗಣ್ಣು ಬಿಡುವ ವೇಳೆ-
ಸಂಜೆ ಪತ್ರಿಕೆಯಲ್ಲಿ ಬಿಸಿ ಬಿಸಿ ಸುದ್ದಿ
'ಸೃಜನಶೀಲ ಕವಿಗೆ ಸಾಹಿತ್ಯ ಪರಿಷತ್ತಿನ ಮನ್ನಣೆ'
ಗೌರವ ಸದಸ್ಯತ್ವದ ಘೋಷಣೆ...
ನಾಳೆ ಸಾರ್ವಜನಿಕ ಸಮಾರಂಭದಲ್ಲಿ
ಒಣ ಸನ್ಮಾನ ದೊಡ್ಡ ಮಾಲಾರ್ಪಣೆ,
ಬರೆವ ಕವಿಗೆ ಯಾವುದರ ಪರಿವೆಯೂ ಇಲ್ಲ
ಹಸಿವಿಗೆ ಒಗ್ಗಿ ಹೋದ ಕವಿ ಕಲ್ಪನೆಯಲಿ
ಹಿಗ್ಗಿ ಹಿಗ್ಗಿ ಬರೆಯುತ್ತಿದ್ದ-
ಪದ್ಯ ನಿರಂತರವಾಗೇ ಹರಿದಿತ್ತು !

* * * *

ಒಳಗೆ ಅಡುಗೆ ಮನೆಯೊಳಗೆ ಕವಿಯ ಹೆಂಡತಿ
ಗೋಡೆಗೆ ಒರಗಿ ಕುಳಿತವಳು
ಉರುಳಿ ಬಿದ್ದಳು ತಣ್ಣಗೆ !
ಹಸಿದ ಕವಿ ಹಸಿ ಹಸಿ ಕಾವ್ಯ ಬರೆದ ಸಾಕ್ಷಿಗೆ
ಮನೆ ತುಂಬ ಮೌನ ಅನುರಣಿಸಿತ್ತು ಮೂಲೆ ಮೂಲೆಗೆ !

# ನಾಗಾರ್ಜುನ

ಮ. ಸು. ಕೃಷ್ಣಮೂರ್ತಿ

'ಕವಿರಾಜಮಾರ್ಗ' ಪ್ರೋಕ್ತ ನಾಗಾರ್ಜುನ ಯಾರು, ಅವನ ಕೃತಿಗಳು ಯಾವುವು ಎಂಬ ಬಗೆಗೆ ನಾವು ಇನ್ನೂ ಕತ್ತಲೆಯಲ್ಲೇ ಇದ್ದೇವೆ. ಈ ಬಗೆಗೆ ಕವಿ ಚರಿತೆಯಲ್ಲಿ ಹೀಗೆ ಹೇಳಿದೆ. "ಈ ಹೆಸರುಳ್ಳ ಒಬ್ಬನು ವೈದ್ಯದಲ್ಲಿ ಬಹಳ ನಿಪುಣನಾಗಿ ನಾಗಾರ್ಜುನ ಕಲ್ಪವೇ ಮೊದಲಾದ ಅನೇಕ ಗ್ರಂಥಗಳನ್ನು ಮಾಡಿದನೆಂದೂ ರಸವಾದದಲ್ಲಿ ಪಾರಂಗತನಾಗಿ ಬೆಟ್ಟಗಳನ್ನೆಲ್ಲಾ ಬಂಗಾರ ಮಾಡಿದನೆಂದೂ ಪ್ರತೀತಿಯಿದೆ. ರಾಜಾವಳೀಕಥೆಯಲ್ಲಿ ನಾಗಾರ್ಜುನನು ಪೂಜ್ಯಪಾದನ ಸೋದರಳಿಯನೆಂದೂ ಪೂಜ್ಯಪಾದನ ಉಪದೇಶ ಮಹಿಮೆಯಿಂದ ಇವನು ಬಂಗಾರ ಮಾಡುವುದನ್ನು ತಿಳಿದುಕೊಂಡು ದೇಶಾಟನ ಮಾಡುತ್ತ ಯಂತ್ರ, ಮಂತ್ರ, ತಂತ್ರಾದಿಗಳಂ ಕಲ್ಪಿಸಿ ಸಿದ್ಧನಾಗಾರ್ಜುನನೆಂಬ ಕೀರ್ತಿ ದಿಗಂತವ್ಯಾಪಿಯಾಗಿರಲು ಶ್ರೀಶೈಲವನ್ನೈದಿ ಮಲ್ಲಿಕಾರ್ಜುನ ಪ್ರತಿಷ್ಠೆಗೈದು ಉತ್ತರ ದೇಶಕ್ಕೆ ಹೋಗಿ ಒಂದೆರಡು ಬೆಟ್ಟಮಂ ಚಿನ್ನಮಂ ಮಾಡಲು ಯತ್ನಿಸಿ ಮುಂದಕ್ಕೆ ಹೋದಾಗ ಇಬ್ಬರು ಸ್ತ್ರೀಯರು ವಂಚಿಸಿ ಇವನನ್ನು ಕೊಂದರೆಂದು ಹೇಳಿದೆ.

ನಾಗಾರ್ಜುನ ಕಕ್ಷಪುಟವೆಂಬ ಒಂದು ವೈದ್ಯಗ್ರಂಥವು ದೊರೆಯುತ್ತದೆ. ಅಲ್ಲದೆ, ನಂದಿಸೂತ್ರಗಳ ಮತ್ತು ಆವಶ್ಯಕ ಸೂತ್ರಗಳ ಆದಿಭಾಗದಲ್ಲಿ ಒಬ್ಬ ನಾಗಾರ್ಜುನನನ್ನು ವಿಶೇಷವಾಗಿ ಸ್ತುತಿಸಿರುವಂತೆ ತಿಳಿಯಬರುತ್ತದೆ.

ಇವರಲ್ಲಿ ನೃಪತುಂಗನು ಹೇಳುವ ನಾಗಾರ್ಜುನನು ಒಬ್ಬನಾಗಿರಬಹುದೋ ಏನೋ ತಿಳಿಯದು.[1]

ಭಾರತದಲ್ಲಿ ಕೊನೆಯ ಪಕ್ಷ ನಾಲ್ಕು ಮಂದಿ ನಾಗಾರ್ಜುನರಿರಬೇಕು. ಮೊದಲನೆಯವನು ಮಾಧ್ಯಮಿಕ ಮತದ ಆಚಾರ್ಯ ಬೌದ್ಧನಾಗಾರ್ಜುನ, ಎರಡನೆಯವನು ಪೂಜ್ಯಪಾದನ ಸೋದರಳಿಯ ನಾಗಾರ್ಜುನ, ಮೂರನೆಯವನು ನಾಥಪಂಥದ ಸಿದ್ಧನಾಗಾರ್ಜುನ, ನಾಲ್ಕನೆಯವನು ರಸಸಿದ್ಧ ನಾಗಾರ್ಜುನ. ರಾಜಾವಳೀ ಕಥೆಯಲ್ಲಿ ಪರಸ್ಪರ ವಿರುದ್ಧವಾದ ಹೇಳಿಕೆಯಿದೆ. ಒಂದುಕಡೆ ಅವನು ಪೂಜ್ಯಪಾದನ ಸೋದರಳಿಯ ಎಂದರೆ ಇನ್ನೊಂದುಕಡೆ ಅವನು ಶ್ರೀಶೈಲಕ್ಕೆ ಹೋಗಿ ಮಲ್ಲಿಕಾರ್ಜುನನ ಪ್ರತಿಷ್ಠೆಗೈದ ಎಂದು ಹೇಳಿದೆ. ಪೂಜ್ಯಪಾದನ ಸೋದರಳಿಯನಾದರೆ ಅವನು ಜೈನನಾಗಿರಬೇಕು. ಹಾಗಿದ್ದ ಪಕ್ಷದಲ್ಲಿ ಅವನು ಮಲ್ಲಿಕಾರ್ಜುನನ ಪ್ರತಿಷ್ಠೆಗೈದುದು ಹೇಗೆ?

---

* 1. ಕವಿ ಚರಿತೆ, 1. ಪರಿಶೋಧಿತ ಮುದ್ರಣ, ಪು. ೧೨

ಕವಿರಾಜಮಾರ್ಗ ಪ್ರೋಕ್ತ ನಾಗಾರ್ಜುನ ಒಬ್ಬ ಬೌದ್ಧಸಿದ್ಧ ರಸವಾದೀ ಆಚಾರ್ಯನಾಗಿರಬೇಕು ಹಾಗೂ ಆತ ಕನ್ನಡದಲ್ಲಿ ಏನನ್ನಾದರೂ ಬರೆದಿರಬೇಕೆಂದು ನಮ್ಮ ಊಹೆ. ಸಂಸ್ಕೃತದಲ್ಲೇನೋ ಆತ ಸಾಕಷ್ಟು ಗ್ರಂಥಗಳನ್ನು ಬರೆದಿದ್ದಾನೆ. ಹಿಂದಿಯ ಪ್ರಸಿದ್ಧ ಲೇಖಕನಾದ ಆಚಾರ್ಯ ಚತುರಸೇನ ಶಾಸ್ತ್ರಿಯವರ 'ಕೀಮಿಯಾ' (ರಸವಿದ್ಯೆ) ಎಂಬ ಗ್ರಂಥ ಇತ್ತೀಚೆಗೆ (೧೯೮೮) ಪ್ರಕಟವಾಗಿದೆ. ಅದರಲ್ಲಿ ಅವರು ರಸಸಿದ್ಧ ನಾಗಾರ್ಜುನನ ಬಗೆಗೆ ಸಾಕಷ್ಟು ಮಾಹಿತಿ ನೀಡಿದ್ದಾರೆ. ಅಷ್ಟೇ ಅಲ್ಲ ಆತನ ಕನ್ನಡದ ಎರಡು ಪದ್ಯಗಳನ್ನು ಉದಾಹರಿಸಿದ್ದಾರೆ. ಈ ಪದ್ಯಗಳತ್ತ ಕನ್ನಡ ವಿದ್ವಾಂಸರ ಗಮನ ಸೆಳೆಯುವುದೇ ಈ ಲೇಖನದ ಉದ್ದೇಶ.

ಅವರ ಪ್ರಕಾರ ಕನ್ನಡದ ಈ ಸಿದ್ಧ ಆದಿಸಿದ್ಧ. ಅವನನ್ನು ಅವರ ಮೊದಲನೆಯ ನಾಗಾರ್ಜುನ ಎಂದು ಕರೆದಿದ್ದಾರೆ. ಆಂಧ್ರರಾಜ ಶಾಲಿವಾಹನನೊಂದಿಗೆ ಈತನಿಗೆ ಮೈತ್ರಿಯಿತ್ತು. ಈತ ಸ್ವಹಸ್ತದಿಂದ ಶಾಲಿವಾಹನನಿಗೆ ಬರೆದ 'ಸುಹೃಲ್ಲೇಖ'ದ ಭಾಷಾಂತರ ಟಿಬೆಟ್ ಹಾಗೂ ಚೀನೀ ಭಾಷೆಯಲ್ಲಿ ದೊರೆತಿದೆ. 'ರಾಜತರಂಗಿಣಿ'ಯಲ್ಲಿ ಆತ ಬುದ್ಧನ ತರುವಾಯ ೧೫೦ ವರ್ಷಗಳಾದ ಮೇಲೆ ಆಗಿ ಹೋದ ಎಂದು ಹೇಳಿದೆ. ಚೀನೀಯಾತ್ರಿಕ ಹ್ಯೂಯೆನ್‌ಸಾಂಗ್ ೬೨೯ರಲ್ಲಿ ಭಾರತಕ್ಕೆ ಬಂದಿದ್ದಾಗ ಈ ಸಿದ್ಧ ಪುರುಷನ ಮಹಿಮೆಯನ್ನು ಕೇಳಿದ್ದ. ಆದ್ದರಿಂದ ಆತನು ಅವನನ್ನು ಉಲ್ಲೇಖಿಸುತ್ತಾನೆ. ರಾಜತರಂಗಿಣಿ ಕೊಡುವ ಕಾಲ ಊಹೆಯದಿರಬೇಕು. ಆಂಧ್ರದಲ್ಲಿ ಶಾತವಾಹನರು ಕ್ರಿ.ಶ. ೬೨ ರಿಂದ ೨೧೮ರವರೆಗೆ ಆಳಿದರು. ಆದ್ದರಿಂದ ಈತ ಎರಡನೆಯ ಇಲ್ಲವೆ ಮೂರನೆಯ ಶಾಲಿವಾಹನನ ಕಾಲದಲ್ಲಿದ್ದ ಎಂದರೆ ೧೭೨ನೆಯ ಇಸವಿಯೇ ಅವನ ಕಾಲ ಎನ್ನುವುದು ಸರಿಹೋಗುತ್ತದೆ.

ಹ್ಯೂಯೆನ್‌ಸಾಂಗ್ ಭಾರತಕ್ಕೆ ಕ್ರಿ.ಶ. ೬೨೯ರಲ್ಲಿ ಬಂದಿದ್ದ. ಅವನು ಇಲ್ಲಿ ೧೫–೨೦ ವರ್ಷಗಳ ಕಾಲ ಇದ್ದ. ಭಾರತಾದ್ಯಂತ ಸಂಚರಿಸಿದ; ಅನೇಕ ವಿದ್ಯೆಗಳನ್ನು ಕಲಿತ, ಗ್ರಂಥ ಸಂಗ್ರಹ ಮಾಡಿದ. ಅವನು ನಾಗಾರ್ಜುನ ಶಾತವಾಹನನ ಮಿತ್ರ ಹಾಗೂ ಸಿದ್ಧ ಪುರುಷ ಎಂದು ಬರೆಯುತ್ತಾನೆ. ಹ್ಯೂಯೆನ್‌ಸಾಂಗನು ದೇವ, ಅಶ್ವಘೋಷ, ಕುಮಾರಲಬ್ಧ ಹಾಗೂ ನಾಗಾರ್ಜುನ ಈ ನಾಲ್ವರು ನಾಲ್ಕು ದಿಕ್ಕುಗಳ ಸೂರ್ಯರು ಎಂದಿದ್ದಾನೆ. ಕ್ರಿ.ಶ. ೪೦೧–೪೦೯ರಲ್ಲಿ ನಾಗಾರ್ಜುನ ಬೋಧಿಸತ್ವನ ಒಂದು ಜೀವನ ಚರಿತ್ರೆ ಚೀನೀ ಭಾಷೆಗೆ ಅನುವಾದಗೊಂಡಿತು. ಈ ಗ್ರಂಥ ಮೊದಲಿಗೆ ಸಂಸ್ಕೃತದಲ್ಲಿ ರಚಿತವಾಗಿದ್ದಿರಬೇಕು; ನೂರು ನೂರೈವತ್ತು ವರ್ಷಗಳ ತರುವಾಯ ಅದರ ಚೀನೀ ಅನುವಾದವಾಗಿರಬೇಕು.

ಶಾತಕರ್ಣಿ ಅಥವಾ ಶಾತವಾಹನ ಆಂಧ್ರ ಅರಸನ ಉಪನಾಮ ಅಥವಾ ಉಪಾಧಿಯಿರಬೇಕು. ಏಕೆಂದರೆ ಭಾರತದ ಇತಿಹಾಸದಲ್ಲಿ ಶಾತಕರ್ಣಿ, ಶಾತವಾಹನ

ಮೊದಲಾದವರು ಪಲವರು ಬರುತ್ತಾರೆ. ಕಳಿಂಗದ ಅರಸ ಖಾರವೇಲನ ಶಾಸನದಲ್ಲಿ ಒಬ್ಬ ಶಾತಕರ್ಣಿಯ ವರ್ಣನೆಯಿದೆ. ಬಲಶಾಲಿಯಾದ ಈ ರಾಜನ ಮೇಲೆ ಖಾರವೇಲ ಮುತ್ತಿಗೆ ಹಾಕಿದ್ದ. ವಾತ್ಸ್ಯಾಯನ ತನ್ನ ಕಾಮಸೂತ್ರದಲ್ಲಿ ಒಬ್ಬ ಶಾತಕರ್ಣಿಯನ್ನು ಹೆಸರಿಸಿದ್ದಾನೆ. ಕಥಾಸರಿತ್ಸಾಗರದಲ್ಲಿ ಶಾತವಾಹನ ದೀಪಕರ್ಣಿಯ ಪುತ್ರ ಎಂದು ಹೇಳಿದೆ. ಕಲಿಯುಗ ರಾಜ ವೃತ್ತಾಂತದಲ್ಲಿ ಯಾವನೋ ಒಬ್ಬ ಶಾತವಾಹನ ವಂಶಿ ಕಾಣ್ವಸುಶರ್ಮನ ಸೇನಾಪತಿ ಎಂದು ಹೇಳಿದೆ; ಕುಂತಲ ಶಾತಕರ್ಣಿಯ ಹೆಸರೂ ಅದರಲ್ಲಿದೆ. ಗೌತಮೀ ಪುತ್ರ ಶಾತಕರ್ಣಿಯ ಅನೇಕ ಶಿಲಾಶಾಸನಗಳು ದೊರೆತಿವೆ. ನಾಸಿಕದ ಪಾಂಡುಲನಾ ಗುಹೆಗಳಲ್ಲಿ ಕೆತ್ತಿರುವ ಶಿಲಾಶಾಸನಗಳಲ್ಲಿ ಆತ ಬಲಶ್ರೀ ಗೌತಮಿಯ ಪುತ್ರನೆಂದು ಹೇಳಿದರೆ ಜೀವಸ್ಮಿತಾ ಶಿಲಾಲೇಖನಗಳಲ್ಲಿ ಗೌತಮೀ ಪುತ್ರ ಎಂದು ಬರೆದಿದೆ. ಈ ಮಹಾವಿಜಯ ಶಕ, ಮನಸ, ಪಹ್ಲವ ಹಾಗೂ ಕ್ಷಹರಾತರನ್ನು ಗೆದ್ದಿದ್ದ.

ಪುರಾಣಗಳಲ್ಲಿ ಇನ್ನೂ ಅನೇಕ ಮಂದಿ ಶಾತಕರ್ಣಿ ಹಾಗೂ ಶಾತವಾಹನರ ಉಲ್ಲೇಖವಿದೆ. ಇದರಲ್ಲಿ ನಾಗಾರ್ಜುನ ಯಾರ ಮಿತ್ರ ಹಾಗೂ ಸಮಕಾಲೀನನಾಗಿದ್ದ ಎಂದು ಹೇಳುವುದು ಕಷ್ಟ. ಆದರೆ ಒಂದು ಮಾತ್ರ ನಿಜ, ಆತ ಹರ್ಷ ಮತ್ತು ಹ್ಯೂಯೆನ್‌ಸಾಂಗ್ (೬೨೯–೬೪೫)ರಿಗಿಂತ ಹಿಂದಿನವನು. ಕ್ರಿ.ಶ. ೪೦೧–೪೦೯ರಲ್ಲಿ ನಾಗಾರ್ಜುನ ಬೋಧಿಸತ್ವನ ಒಂದು ಜೀವನ ಚರಿತ್ರೆ ಚೀಣೀ ಭಾಷೆಗೆ ಅನುವಾದಗೊಂಡಿತು ಎಂಬುದನ್ನು ಮೇಲೆ ನೋಡಿದೆವು. ಅದರ ಮೂಲಗ್ರಂಥ ಸಂಸ್ಕೃತದಲ್ಲಿದ್ದು ಅನುವಾದಕ್ಕೆ ಕೊನೆಯ ಪಕ್ಷ ೧೦೦–೧೫೦ ವರ್ಷ ಮುಂಚೆ ರಚಿತವಾಗಿದ್ದಿರಬೇಕು. ಈ ಆಧಾರದ ಮೇಲೆ ನಾಗಾರ್ಜುನ ಕ್ರಿ.ಶ. ಎರಡನೆಯ ಶತಮಾನದಲ್ಲಿದ್ದ ಎಂದು ಊಹಿಸಿದರೆ ತಪ್ಪಾಗಲಾರದು. ಶುಂಗರು ಮತ್ತು ಕಣ್ವರ ತರುವಾಯ ಶಾತವಾಹನರ ರಾಜ್ಯ ಹುಟ್ಟಿಕೊಂಡಿತು. ಅವರ ರಾಜಧಾನಿ ಪ್ರತಿಷ್ಠಾನ. (ಇಂದಿನ ಪೈಠಣ) ಅವರ ಯಾವನೋ ವಂಶಜ ಆಂಧ್ರದಲ್ಲಿ ಧಾನ್ಯಕಂಟಕದಲ್ಲಿ ಶಾಲಿವಾಹನರ ರಾಜ್ಯ ಸ್ಥಾಪಿಸಿದ. ಅದು ಕ್ರಿ.ಶ. ೭೩ ರಿಂದ ೨೧೮ರವರೆಗಿತ್ತು. ನಾಗಾರ್ಜುನ ಧಾನ್ಯಕಂಟಕದ ಹತ್ತಿರ ಶ್ರೀಶೈಲದಲ್ಲಿ ತನ್ನ ಮಠವನ್ನು ಸ್ಥಾಪಿಸಿದ. ಈ ದೃಷ್ಟಿಯಿಂದಲೂ ಆತ ಕ್ರಿ.ಶ. ಎರಡನೆಯ ಶತಮಾನದ ಸರಿಸುಮಾರಿನಲ್ಲಿದ್ದನೆಂದು ಸಿದ್ಧವಾಗುತ್ತದೆ.

ಶಾಲಿವಾಹನ ತನ್ನ ಶಾಸನ ಕಾಲದಲ್ಲಿ ಬೌದ್ಧರ ನಾಲ್ಕು ಮಠಗಳನ್ನು ಸ್ಥಾಪಿಸಿದ. ಅವುಗಳ ಹೆಸರು ಹೀಗಿವೆ—ಪೂರ್ವ ಶೈಲ, ಅಪರ ಶೈಲ, ರಾಜಗಿರಿಕ ಮತ್ತು ಸಿದ್ಧಾರ್ಥ. ಈ ಮಠಗಳ ಸ್ಥಾಪನೆ ಕ್ರಿ.ಶ. ೨ನೆಯ ಶತಮಾನದ ಮಧ್ಯ ಭಾಗದಲ್ಲಿ ನಡೆದಿರಬೇಕು. ಈ ಮಠಗಳಲ್ಲೂ ನಾಲ್ಕು ಭಿನ್ನ ಭಿನ್ನ ನಿಕಾಯಗಳಾದವು. ಇವು ಒಳ ಪಂಗಡಗಳಿರಬೇಕು. ಈ ನಿಕಾಯಗಳು ತಮ್ಮ ತಮ್ಮ ಮಠಗಳನ್ನು ಸ್ಥಾಪಿಸಿ

ಕೊಂಡವು. ಇವುಗಳಲ್ಲಿ ಪೂರ್ವ ಶೈಲ ಹಾಗೂ ಅಪರ ಶೈಲ ದಕ್ಷಿಣದ ಮಹಾ ಪರ್ವತದ ಮೇಲಿವೆ. ಈ ಪರ್ವತಗಳಲ್ಲೇ ಒಂದು ಮಠದ ಹೆಸರು ಶ್ರೀ ಶೈಲ, ಮತ್ತೊಂದರ ಹೆಸರು ಶ್ರೀ ಪರ್ವತ, ಶ್ರೀ ಶೈಲ ಮಠದ ಹತ್ತಿರವೇ ಆಂಧ್ರ ಪತಿ ಶಾಲಿವಾಹನನ ಹೊಸ ರಾಜಧಾನಿ ಧ್ಯಾನ ಕಂಟಕವಿತ್ತು. ನಾಗಾರ್ಜುನ ಇದ್ದದ್ದು ಇಲ್ಲೇ. ಈ ಪರಂಪರೆ ಆತ ಬೌದ್ಧ ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಆದರೆ ಜೈನ ಸಾಹಿತ್ಯದಲ್ಲಿ ನಾಗಾರ್ಜುನನ ಬಗೆಗೆ ಸಾಕಷ್ಟು ಕಥೆಗಳು ದೊರೆಯುತ್ತವೆ. 'ಸ್ತಂಭನ ತೀರ್ಥಾ ವತಾರ ಪ್ರಬಂಧ' ಎಂಬ ಗ್ರಂಥದಲ್ಲಿ ನಾಗಾರ್ಜುನನ ಬಗೆಗೆ ವಿಸ್ತೃತ ವರ್ಣನೆಯಿದೆ. ಅದರ ಪ್ರಕಾರ ಢಂಕಾ ಎಂಬ ಹೆಸರಿನ ರಾಜನ ಮಗ ರಣಸಿಂಹನು ಭೂಪಲಾ ಎಂಬ ನಾಗ ಕನ್ಯೆಯನ್ನು ಮೋಹಿಸಿ ಮದುವೆಯಾದ, ಅವಳಲ್ಲಿ ಅವನಿಗೆ 'ನಾಗಾರ್ಜುನ' ಎಂಬ ಹೆಸರಿನ ಮಗ ಹುಟ್ಟಿದ. ಆ ಪಾತಾಳ ಪಾಲಕನು ಮಗನ ಮೇಲಿನ ಮಮತೆಯಿಂದ ಆತನಿಗೆ ಎಲ್ಲ ವಿಧವಾದ ನಾರು, ಬೇರು ಮೊದಲಾದ ಔಷಧ ಮೂಲಿಕೆಗಳ ಪರಿಚಯ ಮಾಡಿ ಕೊಟ್ಟ. ಅದರ ಪ್ರಭಾವದಿಂದ ಅವನಿಗೆ ಮಹಾ ಸಿದ್ಧಿಯುಂಟಾಯಿತು. ಅವನು ಸಿದ್ಧ ಪುರುಷನಾಗಿ ಭೂಲೋಕಕ್ಕೆ ಬಂದು ಶಾತವಾಹನ ರಾಜನ ಕಲಾಗುರುವಾದ. ಸಾಕಷ್ಟು ಪ್ರತಿಷ್ಠೆಯಿಂದಿದ್ದರೂ ಅವನು ವಿದ್ಯಾವ್ಯಸನಿಯಾಗಿದ್ದ. ಆಕಾಶಯಾನ ವಿದ್ಯೆಯನ್ನು ಕಲಿಯಲು ಶ್ರೀಪಾದಲಿಪ್ತ ಪುರದಲ್ಲಿ ಪಾದಲಿಪ್ತಾಚಾರ್ಯರ ಸೇವೆಯಲ್ಲಿದ್ದು ವ್ರತಸ್ಥನಾಗಿದ್ದ. ಭೋಜನ ಸಮಯದಲ್ಲಿ ಕಾಲುಗಳಿಗೆ ಒಂದು ಪ್ರಮಾಣದಲ್ಲಿ ಲೇಪ ಮಾಡಿಕೊಂಡು, ಗಗನದಲ್ಲಿ ಹಾರಾಡುವ ಅಷ್ಟಾಪದ ಮುಂತಾದ ತೀರ್ಥಂಕರ (ತೀರ್ಥ)ರನ್ನು ನಮಸ್ಕರಿಸಿ ಅವರು ಸುಮುಖಿಯಾಗಿ ಕುಳಿತಿರುವಾಗ ಅವರ ಪಾದಗಳನ್ನು ತೊಳೆದು ನೂರ ಏಳು ಔಷಧಿಗಳ, ಬಣ್ಣ, ರುಚಿ, ಗಂಧಗಳನ್ನು ಗುರುತಿಸಿ ಗುರುಗಳನ್ನು ಲೆಕ್ಕಿಸದೆ ಪದಲೇಪನ ಮಾಡಿಕೊಂಡು ನವಿಲಿನಂತೆ ಹಾರಲು ಹೋಗಿ ಹಳ್ಳದಲ್ಲಿ ಬಿದ್ದು ಗಾಯಗೊಂಡು ಜರ್ಜರದೇಹಿಯಾದನು. ಅದೇನೆಂದು ಗುರುಗಳು ಕೇಳಲು ಆಗ ಅವನು ತನ್ನ ಎಲ್ಲ ವೃತ್ತಾಂತವನ್ನೂ ಹೇಳಿದನು. ಚತುರರೂ ಚಮತ್ಕೃತಮತಿಗಳೂ ಆದ ಅವರು ನಗುತ್ತ ಅವನ ತಲೆಯನ್ನು ಷಾಷ್ಟಿಕ ಅಕ್ಕಿ ನೀರಿನಿಂದ ಆ ಔಷಧಿಗಳು ಹೋಗುವಂತೆ ತೊಳೆದು ಆ ಪಾದಲೇಪನದಿಂದ ಗಗನಗಾಮೀ ವಿದ್ಯೆಯನ್ನು ಅನುಗ್ರಹಿಸಿ ಒಂದು ಸಿದ್ಧಿಯನ್ನು ಕರುಣಿಸಿದರು. ಶ್ರೀ ಪಾರ್ಶ್ವನಾಥರಿಂದ ನಿರ್ಮಿಸಲ್ಪಟ್ಟ ರಸವು ಇಪ್ಪತ್ತು ಮೂರು ಲಕ್ಷಣಗಳಿಂದ ಕೂಡಿದ ಪತಿವ್ರತೆಯಿಂದ ಮರ್ದಿಸಲ್ಪಟ್ಟರೆ ಕೋಟಿವೇಧಿಯಾಗುವುದು ಎಂದು ಅವರಿಂದ ತಿಳಿದನು, ಹಿಂದೆ ಸಮುದ್ರ ವಿಜಯದಾಶಾರ್ಹನು ತ್ರಿಕಾಲವೇದಿಗಳಿಂದ ಶ್ರೀ ಪಾರ್ಶ್ವನಾಥರ ರತ್ನಮಯ ಮೂರ್ತಿಯನ್ನು ನಿರ್ಮಿಸಿ ದ್ವಾರಾವತೀ ಅರಮನೆಯಲ್ಲಿ ಇಟ್ಟಿದ್ದನು. ದ್ವಾರಾವತೀ ಪಟ್ಟಣವು ಸುಟ್ಟು ಸಮುದ್ರದಲ್ಲಿ ಮುಳುಗಲು ಅದು ಅಲ್ಲಿ ಹಾಗೆಯೇ ಉಳಿಯಿತು. ಕಾಂತೀಯ ಸಾಮಾಂತ್ರಿಗದ ಧನಪತಿ ಎಂಬಾತ

ಹಡಗಿನಲ್ಲಿ ದೇವತಾರ್ಪಣೆಯನ್ನು ಮಾಡುತ್ತಿದ್ದಾಗ ಅದು ಅಲ್ಲಿ ಬೀಳಲು ಅಲ್ಲಿಯೇ ಜಿನಬಿಂಬವಿರುವುದೆಂದು ನಿರ್ಣಯಿಸಿ, ನಾವಿಕರನ್ನು ಅಲ್ಲಿಯೇ ಬಿಟ್ಟು ಏಳು ಆ ಮತಂತುಗಳಿಂದ ಸಂದಾನಿತವನ್ನು ಮೇಲೆತ್ತಿ ತನಗೆ ಅತ್ಯಂತ ಲಾಭವಾಯಿತೆಂದು ಯೋಚಿಸಿ ತಾನೇ ನಿರ್ಮಿಸಿದ ಅರಮನೆಯಲ್ಲಿ ಇಟ್ಟನು. ನಾಗಾರ್ಜುನನು ಅತ್ಯಂತ ಶ್ರೇಷ್ಠವಾದ ಬಿಂಬವನ್ನು ಸಿದ್ಧರಸ ಸಿದ್ಧಿಗಾಗಿ ಕದ್ದು ಸಂಡೀನದಿಯ ದಡದಲ್ಲಿಟ್ಟು ಅದರ ಮುಂದೆ ರಸಸಾಧನೆಗಾಗಿ ಶಾತವಾಹನನ ಹೆಂಡಿರಲ್ಲಿ ಒಬ್ಬಳಾದ ಚಂದ್ರಲೇಖಾ ಎಂಬವಳಿಂದ ಪ್ರತಿ ರಾತ್ರಿಯಾರಿಗೂ ತಿಳಿಯದಂತೆ ರಸಮರ್ದನವನ್ನು ಮಾಡಿಸುತ್ತಿದ್ದನು. ಹೀಗೆ ಅವನು ಅಲ್ಲಿಗೆ ಮತ್ತೆ ಮತ್ತೆ ಬಂದು ಹೋಗುತ್ತಿರಲು ನಾಗಾರ್ಜುನ ತನ್ನ ಬಂಧು ಎಂದು ತಿಳಿದು ಮರ್ದನದ ಕಾರಣವನ್ನು ಕೇಳಿದಳು. ಅವನು ತನ್ನ ಕಲ್ಪನೆಯಿಂದ ಕೋಟಿವೇಧಿ ರಸವ ಯಥಾವತ್ತಾದ ವೃತ್ತಾಂತವನ್ನು ಹೇಳಿದನು. ಅವಳಿಗೆ ಆ ಮಾತಿನಿಂದಸದಳವಾದ ಸತ್ಕಾರಮಾಡಿ ಬಹಳ ಸೌಜನ್ಯವನ್ನು ತೋರಿದನು. ಹೀಗಿರಲು ಅವಳು ಒಮ್ಮೆ ನಿಜಾಗಜ ಎಂಬವರಿಗೆ ಈ ವೃತ್ತಾಂತವನ್ನು ಹೇಳಿದಳು. ಆತ ಅದರಿಂದ ಆಕರ್ಷಿತನಾಗಿ ತನ್ನ ರಾಜ್ಯವನ್ನು ಬಿಟ್ಟು ನಾಗಾರ್ಜುನನು ವಾಸವಾಗಿದ್ದ ಮನೆಗೆ ಬಂದನು. ಕಪಟದಿಂದ ರಸವಿದ್ಯೆಯನ್ನು ತಿಳಿಯಲು ಗುಪ್ತವೇಷದಿಂದ ನಾಗಾರ್ಜುನನು ಊಟಮಾಡುವಾಗ ಅವಳಿಗೆ ಹಣವನ್ನು ಕೊಟ್ಟು ಸಂತೋಷಪಡಿಸಿ ರಸವಾರ್ತೆಯನ್ನು ಕೇಳಿದನು. ಅವಳು ಆತನಿಗೆ ಅದನ್ನು ತಿಳಿಸಲು ಅದಕ್ಕೋಸ್ಕರ ಉಪ್ಪಿನ ರಸವನ್ನು ಮಾಡಿ ಆರು ತಿಂಗಳ ನಂತರ ಅದರಲ್ಲಿ ರಸವನ್ನು ಸೃಷ್ಟಿಸಿದಳು. ಸನ್ನೆಯಿಂದ ರಸವು ಸಿದ್ಧವಾಗಿದೆಯೆಂದು ಹೇಳಿದಳು. ಆಮೇಲೆ ರಸಪಾನ ಮಾಡುವ ಆಸೆಯುಳ್ಳವರಾಗಿ ಭಾಗಿನೇಯರನ್ನು ದರ್ಭಾಂಕುರ ಮೃತ್ಯು ಎಂಬ ಪರಂಪರೆಗನುಗುಣವಾಗಿ ಅಲ್ಲೇ ಕೊಂದರು. ಆ ರಸವು ದೇವತಾಧಿಷ್ಠಾನವಾಗಿದ್ದರಿಂದ ಅದೃಶ್ಯವಾಯಿತು. ಆ ರಸ ಎಲ್ಲಿ ಸ್ತಂಭಿತವಾಯಿತೋ ಅಲ್ಲಿ ಸ್ತಂಭನಕ ಎಂಬ ಹೆಸರಿನ ಪಾರ್ಶ್ವನಾಥ ತೀರ್ಥ ಉಂಟಾಗಿ ಸಕಲಲೋಕಗಳ ಇಚ್ಛೆಯನ್ನು ಪೂರೈಸುವ ಶಕ್ತಿಯುಳ್ಳದ್ದಾಯಿತು. ಆ ಮೇಲೆ ಕೊಂಚ ಕಾಲಾನಂತರ ಆ ಬಿಂಬವು ತನ್ನ ಮುಖವನ್ನು ಮಾತ್ರ ಬಿಟ್ಟು ಅದೃಶ್ಯವಾಯಿತು. ಅನಂತರ ಶ್ರೀಶಾಸನ ದೇವತಾವೇಶದಿಂದ ಆರು ತಿಂಗಳನ್ನು ಕಳೆಯಲು ನಿರ್ಣಯಿಸಿ ಕಠಿಣ ಪ್ರಯೋಗದಿಂದಾಗಿ ಮಾತು ನಿಂತು ಹೋಗಲು ಶ್ರೀ ಅಭಿದೇವಸೂರಿಗಳ ದೇಹದಲ್ಲಿ ದೊಡ್ಡ ರೋಗ ಉಂಟಾಯಿತು. ಆಗ ಪಾತಾಳಪಾಲನು ಶ್ರೀಧರಣೇಂದ್ರ ಎಂಬ ಹೆಸರಿನ ಕೆಂಪುಹಾವಿನ ನಾಲಿಗೆಯಿಂದ ಅದನ್ನು ನೆಕ್ಕಿಸಿ ಆ ರೋಗವನ್ನು ವಾಸಿ ಮಾಡಿಸಿ ಆ ತೀರ್ಥದ ಬಗೆಗೆ ಶ್ರೀ ಮದಭವದೇವಸೂರಿಗಳಿಗೆ ತಿಳಿಸಿದನು. ಶ್ರೀ ಸಂಘರೊಡನೆ ಅಲ್ಲಿಗೆ ಬಂದು ಅಲ್ಲಿ ಒಂದು ಹಾಲು ಕರೆಯುವ ಹಸುವಿನ ಬಗೆಗೆ ಗೋಪಾಲ ಬಾಲಕರು ತಿಳಿಸಲು ಸೂರಿಗಳು ಅದನ್ನು ನೋಡಿ ಭೂಮಿಯಲ್ಲಿ 288 ಸ್ತುತಿಗಳನ್ನು ಮಾಡಿ

307ನೆಯ ಶ್ಲೋಕದಿಂದ ಪಾರ್ಶ್ವನಾಥ ಬಿಂಬವನ್ನು ನೋಡಿದರು. ದೇವತಾ ದರ್ಶನದ ಆ ವೃತ್ತವನ್ನು ಗೋಪ್ಯವಾಗಿರಿಸಿದರು.

"ಯಾವ ಮಾರ್ಗದಲ್ಲಿ ನಾಲ್ಕು ಸಾವಿರ ಅಂಗುಲ ಪ್ರಮಾಣವು ದೇವಾಲಯ ನಿರ್ಮಿತವಾಗಿದೆಯೋ ಅದರ ಮಧ್ಯದಲ್ಲಿ ವಾರುವ, ವಾಸುದೇವ, ವರುಣರು ವಾಸಿಸುವರೋ, ಕಾಂತಿಯಿಂದ ಕೂಡಿದ ಪ್ರಸಿದ್ಧ ನಾಗಾರ್ಜುನನಿಂದ ಯಾವುದು ಅರ್ಚಿಸಲ್ಪಟ್ಟಿದೆಯೋ ಆ ಸ್ತಂಭನಕ ಪುರದಲ್ಲಿ ಮೂಡಿದ ಶ್ರೀ ಪಾರ್ಶ್ವನಾಥಜಿನರು ನಮ್ಮನ್ನು ಕಾಪಾಡಲಿ".

ಈ ವರ್ಣನೆ ಐತಿಹಾಸಿಕ ತತ್ತ್ವಗಳಿಂದ ಭಿನ್ನ. ಇದರಲ್ಲಿರುವ ನಾಗಾರ್ಜುನನ ಉತ್ಪತ್ತಿ ಮತ್ತು ಸ್ವಭಾವಕ್ಕೂ ಬೇರೆ ಕಡೆ ದೊರೆಯುವ ವೃತ್ತಾಂತಕ್ಕೂ ಅಂತರವಿದೆ. ಇವರಲ್ಲಿ ರಾಜನ ಪತ್ನಿ ಚಂದ್ರಲೇಖಾಳನ್ನು ನಾಗಾರ್ಜುನ ಕರೆದುಕೊಂಡು ಬರುತ್ತಿದ್ದ ಅಂಶವಿಲ್ಲ. ರಾಜನಿಗೆ ಈ ವಿಷಯ ತಿಳಿದಾಗ ಅವನು ನಾಗಾರ್ಜುನನನ್ನು ಕೊಲ್ಲಿಸಿದ. ಇದರಿಂದ ಗೊತ್ತಾಗುವ ಒಂದು ಅಂಶವೆಂದರೆ ರಾಜನಿಗೆ ನಾಗಾರ್ಜುನನ ರಸಾಯನ ಸಿದ್ಧಿ ತಿಳಿದಾಗ ಅವನು ತನ್ನ ಇಬ್ಬರು ಗಂಡು ಮಕ್ಕಳನ್ನೂ ಕೋಟಿವೇಧಿ ರಸಧಾರವನ್ನು ತರುವಂತೆ ಹೇಳಿ ಅವನ ಆಶ್ರಮಕ್ಕೆ ಕಳಿಸಿದ. ಅವರು ಸ್ವತಃ ರಸಸಿದ್ಧಿಯನ್ನು ಪಡೆದರು ಮತ್ತು ಗುಪ್ತರೀತಿಯಿಂದ ಹಣದ ಆಶೆ ತೋರಿಸಿ ದಾಸಿಯನ್ನು ವಶಪಡಿಸಿಕೊಂಡರು. ಅನಂತರ ನಾಗಾರ್ಜುನನನ್ನು ವಿಷ ತಿನ್ನಿಸಿ ಕೊಲ್ಲಿಸಿದರು. ಆದರೆ ಅನಂತರ ಅವರು ಗಳಿಸಿದ ರಸ ಕೂಡ ಪ್ರಯೋಜನಕ್ಕೆ ಬರಲಿಲ್ಲ. ಈ ವರ್ಣನೆಯಿಂದ ಗೊತ್ತಾಗುವ ಮತ್ತೊಂದು ಅಂಶವೆಂದರೆ ಆ ರಸ ಗುಪ್ತವಾಗಿಬಿಟ್ಟಿತು. ರಸ ಸ್ತಬ್ಧವಾಗಿದ್ದ ಊರು ಸ್ತಂಭನಪುರ (ಇಂದಿನ ಖಂಬಾತ್) ಎಂದು ಪ್ರಸಿದ್ಧವಾಯಿತು. ಬಹುಶಃ ಈ ಘಟನೆಯೂ ಅಲ್ಲೇ ನಡೆದಿರಬೇಕು.

ಆದರೆ ಈ ಉಲ್ಲೇಖ ನಾಗಾರ್ಜುನನ ವಿಷಯವನ್ನು ಇನ್ನೂ ತೊಡಕಾಗಿ ಮಾಡುತ್ತದೆ. ಬೌದ್ಧಸಿದ್ಧನಾದ ನಾಗಾರ್ಜುನನನ್ನು ಇಲ್ಲಿ ಜೈನನೆಂದು ತೋರಿಸಲು ಪ್ರಯತ್ನಿಸಲಾಗಿದೆ. ಪಾರ್ಶ್ವನಾಥನ ಲೀಲೆ ಇವೆಲ್ಲ ಜೈನವಾತಾವರಣ ಸೃಷ್ಟಿಗಾಗಿ ತಂದವು. ನಮಗೆ ತಿಳಿದ ಮಟ್ಟಿಗೆ ರಸಸಿದ್ಧ ನಾಗಾರ್ಜುನ ಬೌದ್ಧನೇ ಹೊರತು ಜೈನನಲ್ಲ.

ನಾಗಾರ್ಜುನನಿಂದ ಆರಂಭವಾದ ಈ ರಸಸಿದ್ಧ ಪರಂಪರೆ ವಜ್ರಯಾನವಾಗಿ ಪರಿಣಮಿಸಿತು. ಇದರಲ್ಲೇ ಸಿಂಹಪಾದನೇ ಮೊದಲಾದ ೮೪ ಮಂದಿ ಸಿದ್ಧರು ಆಗಿ ಹೋದರು. ಇವರಲ್ಲಿ ಪ್ರಸಿದ್ಧನಾದ ಕನ್ಹಾಪಾ ಕರ್ಣಾಟಕದವನು. ಅಷ್ಟೇ ಅಲ್ಲ ಈ ಸಿದ್ಧ ಪರಂಪರೆಯೇ ಮುಂದೆ ನಾಥ ಸಿದ್ಧ ಪರಂಪರೆಯಾಗಿ ಪರಿಣಮಿಸಿತು. ಈ ನಾಥ ಸಿದ್ಧರಲ್ಲಿ ಅಲ್ಲಮಪ್ರಭು ಹಾಗೂ ರೇವಣರ ಉಲ್ಲೇಖವೂ ಇದೆ.

ಆದಿನಾಥಂ ಮೂಲನಾಥಂ ಗೋರಕ್ಷ ಕೌಂಕಣೇಶ್ವರವ್. ಚೋಲಾಂಧ್ರದೇಶಂ ಕಥನೀಶಂ ಪೌದ್ಗಿಯಂ ಚಿಂಚಿಣೇಶ್ವರವ್ ಚೌರಂಗೀಮೇತ್ಯಸ್ಯಾಸಾಖ್ಯಮಿಂ ಸವ ಸಂತರ್ಪಯೇತತಃ। ಚೌರಂಗೀ ಕರ್ಪಟೀ ಧೋಂಟೀ ಚುಲ್ಲಿಕಮದ್ವಯಂತತಃ। ಬಾಲಗೋವಿಂದ ಸಿದ್ಧಂಚ ವ್ಯಾಲಿಂ ನಾಗಾರ್ಜುನಂ ತತಃ। ಭೋರಂಡಸೂರ್ಪ ಘಂಟಾಕ್ಷಂದುತ್ತಾರ್ಥೀ ರೇವಣಂ ತತಃ। ಸಿದ್ಧಂ ಕುಕ್ಕುರಪಾದಂ ಚ ಸೂರ್ಯಪಾದಂ ಕಣ್ಯೆರಿತವ್ ಸಿದ್ಧಂ ಟಿಂಟಿಣಿಕಾಸ್ಯಾಂಚ ಸಿದ್ಧಿನ್ ಷೋಡಷತರ್ಪಯೇತ್। (ಆನಂದ ಕಂದ).

'ಸಿದ್ಧೇರಸೇಕರಿಷ್ಯೇऽಗಂ ನಿರ್ದಾರಿದ್ರ್ಯಗದಂ ಜಗತ್', 'ಸಿದ್ಧರಸದಿಂದ ಜಗತ್ತನ್ನು ನಿರ್ದಾರಿದ್ರ್ಯವನ್ನಾಗಿ ಮಾಡುತ್ತೇನೆ' ಎಂದು, ಘೋಷಿಸಿದ ನಾಗಾರ್ಜುನ ಮೂಲತಃ ಕರ್ಣಾಟಕದವನು. ಧಾರವಾಡದ ಕಡೆಯವನು ಎಂದು ಶ್ರೀ ಚತುರಸೇನಶಾಸ್ತ್ರಿಯವರು ಅಭಿಪ್ರಾಯಪಡುತ್ತಾರೆ. ಅವನು ಧಾರವಾಡದ ಹತ್ತಿರ ಕಪೋತ ಗುಡ್ಡದಲ್ಲಿ ತನ್ನ ರಸಪ್ರಕ್ರಿಯೆಗಾಗಿ ಒಂದು ಒಲೆಯನ್ನು ಕಟ್ಟಿಸಿದ್ದನಂತೆ. ಅವನ 'ತೋನಾಗಾಂವ್' ನಲ್ಲಿದ್ದನಂತೆ. ಅವನ ಕೀರ್ತಿಯನ್ನು ಕೇಳಿ ರಾಜ ಶಾಲಿವಾಹನ ತನ್ನ ಇಬ್ಬರು ಮಗಂದಿರನ್ನು ಅವನ ಶಿಷ್ಯರನ್ನಾಗಿ ಮಾಡಿದ್ದನಂತೆ. ಅನಂತರ ನಾಗಾರ್ಜುನ ಎಲ್ಲಿ ಬೆಟ್ಟಗುಡ್ಡಗಳನ್ನೆಲ್ಲ ಚಿನ್ನವನ್ನಾಗಿ ಮಾಡಿಬಿಟ್ಟಾನೋ ಎಂಬ ಭೀತಿಯಿಂದ ವಿಷ ನಿಕ್ಕಿಸಿ ಅವನನ್ನು ಕೊಲ್ಲಿಸಿದನಂತೆ. ಸಾಯುವಾಗ ನಾಗಾರ್ಜುನ ತನ್ನ ರಸವಿದ್ಯೆಯ ರಹಸ್ಯೋದ್ಘಾಟನೆ ಮಾಡಲು ಕನ್ನಡದಲ್ಲಿ ಹೀಗೆ ಹೇಳಿದನಂತೆ.

> ತುತ್ಥಂರಸ ಗಂಧಕಂ। ಸುಧ್ಯಾರಸಗಂಧಕಂ।
> ಮತ್ತೊಂದು ಮತ್ತೊಂದು। ಮತ್ತೊಂದು। ಮತ್ತೊಂದು।

ಎಂದರೆ ಮೈಲುತುತ್ತ, ಪಾದರಸ ಮತ್ತು ಗಂಧಕ, ಇವುಗಳ ಜೊತೆಗೆ ಮತ್ತೊಂದನ್ನು ಬೆರೆಸಬೇಕು, ನಾಲ್ಕನೆಯ ವಸ್ತು ಅವನ ನೆನಪಿಗೆ ಬಾರದೇ ಹೋಯಿತು, ಮತ್ತೊಂದು ಮತ್ತೊಂದು ಎಂದು ನೆನಪಿಸಿಕೊಳ್ಳುತ್ತಿರುವಾಗಲೇ ಅವನ ಮಾತು ನಿಂತಿತು.

ಶಾಸ್ತ್ರಿಯವರ ಪ್ರಕಾರ ಕರ್ಣಾಟಕ ಪರಂಪರೆಯಂತೆ ನಾಗಾರ್ಜುನ ರಸವಿದ್ಯೆಯನ್ನು ಸಿದ್ಧಿಸಿಕೊಳ್ಳಲು ತುಂಬ ಪರಿಶ್ರಮಪಟ್ಟನಂತೆ. ಎಷ್ಟು ಮಾಡಿದರೂ ಸಿದ್ಧಿ ದೊರಕದಿರಲು ಅವನು ನಿರಾಶೆಗೊಂಡು ಹೀಗೆ ಹೇಳಿ ಭಿಕ್ಷೆ ಬೇಡುತ್ತಿದ್ದನಂತೆ.

> "ಭೃಂಗವೇಯಲಿಲ್ಲ
> ವಡ್ಗ ಬಲಿಯಲಿಲ್ಲ!
> ರಸ ಅಲ್ಲಲಿಲ್ಲ ಸುಟ್ಟು
> ಕಂಗೆಟ್ಟು ಹಾಳಾದೆನಾ ಭಿಕ್ಷಾಂ ದೇಹಿ." ॥

'ಅರ್ಥಾರ್ಥ್ ಭೃಂಗ (ಅಭ್ರಕ) ಬೇಯಲಿಲ್ಲ, ವಜ್ರ ಎಂದರೆ ತವರದ ಸ್ತಂಭವಾಗಲಿಲ್ಲ. ರಸ (ಪಾದರಸ) ಬೆಂಕಿಯಲ್ಲಿ ನಿಲ್ಲಲಿಲ್ಲ. ಇದರಿಂದ ನಾನು ಸುಟ್ಟು ಕಂಗೆಟ್ಟು ಹಾಳಾದೆ. ಭಿಕ್ಷೆ ನೀಡಿ'.

ಇಲ್ಲಿ ನಮಗೆ ಪ್ರಸ್ತುತವಾದುದೆಂದರೆ ಎರಡನೆಯ ಶತಮಾನದಲ್ಲಿದ್ದ ನಾಗಾರ್ಜುನ ಪ್ರಥಮರಸಸಿದ್ಧ ಮತ್ತು ಅವನ ಮಾತೃಭಾಷೆ ಕನ್ನಡ. ಇವನದೆಂದು ಶಾಸ್ತ್ರಿಗಳು ಉದ್ಧರಿಸಿದ ಎರಡು ಪದ್ಯಗಳು ಯಾವ ಮೂಲದಿಂದ ದೊರೆತವು ಎಂದು ಹೇಳಿಲ್ಲ. ಈ ಎರಡು ಪದ್ಯಗಳ ಭಾಷೆ ಕೂಡ ಈಚಿನದೆಂದು ಕಾಣುತ್ತದೆ; ಅಥವಾ ಈಚಿನ ಸಂಸ್ಕಾರವಾಗಿದೆ. ಏನಾದರೂ ಆಗಲಿ ಎರಡನೆಯ ಶತಮಾನದ ಕನ್ನಡದ ಕೆಲವು ತುಣುಕುಗಳು ಸಿಕ್ಕಿರುವುದು ನಮ್ಮ ಭಾಗ್ಯ. ಪದ್ಯಗಳನ್ನು ನೋಡಿದರೆ ಅದರಲ್ಲೂ ದ್ವಿತೀಯಾಕ್ಷರ ಪ್ರಾಸವನ್ನು ನೋಡಿದರೆ ನಾಗಾರ್ಜುನ ಏನನ್ನಾದರೂ ಬರೆದಿರಬೇಕು ಎನ್ನಿಸುತ್ತದೆ. ಕವಿರಾಜಮಾರ್ಗಕಾರ ಗದ್ಯಕಾರರ ಜೊತೆ ನಾಗಾರ್ಜುನನನ್ನು ಹೆಸರಿಸಿರು ವುದರಿಂದ ಅವನು ಗದ್ಯದಲ್ಲೂ ರಸವಿದ್ಯೆಯನ್ನು ಕುರಿತಾದ ಗ್ರಂಥವನ್ನು ಬರೆದಿರ ಬೇಕು. ನಾಗಾರ್ಜುನ ಬರೆದ ಕೆಲಗ್ರಂಥಗಳ ಟಿಬೆಟ ಅನುವಾದ ದೊರೆಯುತ್ತದೆ. ಅವುಗಳನ್ನು ಪತ್ತೆ ಹಚ್ಚಿ ಅವುಗಳ ಆಧಾರದ ಮೇಲೆ ಮೂಲವನ್ನು ಹುಡುಕ ಬೇಕಾಗುತ್ತದೆ.

# ''ಮುತ್ತಳ್ಳಿ (ತಾ. ಶಿಕಾರಿಪುರ)ಯ ಮೂರು ಅಪೂರ್ವ ಗೋಸಾಸಗಳು''

---

ಡಾ. ಎಂ. ಬಿ. ನೇಗಿನಹಾಳ
ಡಾ. ಭೋಜರಾಜ ಪಾಟೀಲ

ಈಗಾಗಲೇ ನಾವು ನಾಗರಖಂಡ ಪ್ರದೇಶದಲ್ಲಿ ಕಂಡು ಬಂದ ಬಹಳಷ್ಟು ಗೋಸಾಸಗಳ ಬಗ್ಗೆ ವಿವರಗಳನ್ನು ಸಂಗ್ರಹಿಸಿ ಬೇರೊಂದೆಡೆ ಕೊಟ್ಟಿದ್ದೇವೆ. ಮುತ್ತಳ್ಳಿಯ ಜೇನುಮರಡಿಯಲ್ಲಿ ಒಂದೇ ಕಡೆಗೆ ಒಟ್ಟು 30 ಗೋಸಾಸಗಳ ಸಮುದಾಯವಿರುವ ಸಂಗತಿಯನ್ನು ಅಲ್ಲಿ ಗುರುತಿಸಿದೆ. ಅವುಗಳಲ್ಲಿ ಐದು ಲಿಪಿ ಸಹಿತವಾಗಿವೆಯೆಂಬುದನ್ನು ಈ ಮುಂಚೆ ನಾವು ಗಮನಿಸಿದ್ದೆವು. ಇತ್ತೀಚಿನ ನಮ್ಮ ಪುನಃಪರಿಶೀಲನೆಯಲ್ಲಿ ಇನ್ನೂ ಎರಡು ಗೋಸಾಸಗಳ ಮೇಲೆ ಶಾಸನ ಕೆತ್ತಿರುವುದು ಗಮನಕ್ಕೆ ಬಂದಿದೆ. ಜೊತೆಗೆ ಇವೆರಡು ಶಾಸನಗಳು ಐತಿಹಾಸಿಕವಾಗಿ ಕೂಡ ಅಷ್ಟೇ ಮಹತ್ವಪೂರ್ಣವಾಗಿವೆ. ಇವುಗಳಲ್ಲಿ ಒಂದು ಶಾಸನ ರಾಷ್ಟ್ರಕೂಟ ದೊರೆ ಕನ್ನರ ಮತ್ತು ಅವನ ಮಗ ಪ್ರಭೂತವರ್ಷ ಗೋವಿಂದರ ಸಂಯುಕ್ತ ರಾಜ್ಯ ಭಾರವನ್ನು ಉಲ್ಲೇಖಿಸಿದೆ. ಎಂದರೆ ಈ ಶಾಸನೋಕ್ತ ಕನ್ನರ ಮತ್ತು ಗೋವಿಂದ ಇವರು ರಾಷ್ಟ್ರಕೂಟ ಚಕ್ರವರ್ತಿ ಒಂದನೆಯ ಕೃಷ್ಣ ಮತ್ತು ಅವನ ಹಿರಿಯ ಮಗ ಇಮ್ಮಡಿ ಗೋವಿಂದರೆಂಬುದು ಸ್ಪಷ್ಟ.

ಇಲ್ಲಿನ ಎರಡನೆಯ ಶಾಸನದಲ್ಲಿ ಕೇವಲ ಪ್ರಭೂತ ವರ್ಷಗೋವಿಂದನ ಹೆಸರು ಮಾತ್ರ ಉಲ್ಲೇಖಿಸಲ್ಪಟ್ಟಿದೆ ಎಂದರೆ ಒಂದನೆಯ ಕೃಷ್ಣನು ಆಗ ಜೀವಿಸಿರದೇ ರಾಷ್ಟ್ರಕೂಟರ ಅಧಿಕಾರಸೂತ್ರಗಳೆಲ್ಲ ಎರಡನೆಯ ಗೋವಿಂದನಿಗೆ ಹಸ್ತಾಂತರಗೊಂಡಿರುವುದು ಖಚಿತ. ಇಮ್ಮಡಿಗೋವಿಂದನ ತಮ್ಮ ಧ್ರುವನ ಹೆಸರನ್ನು ಉಲ್ಲೇಖಿಸುವ ಎರಡು ಪ್ರತ್ಯೇಕ ಶಾಸನಗಳು ಮುತ್ತಳ್ಳಿಯ ಇದೇ ಗೋಸಾಸಗಳ ಸಮುದಾಯದಲ್ಲಿ ದೊರೆತಿರುವುದನ್ನು ನಾವು ಈಗಾಗಲೇ ಬೆಳಕಿಗೆ ತಂದಿದ್ದೇವೆ. ಎಂದರೆ ಇಲ್ಲಿ ಲಿಪಿಸಹಿತವಾಗಿ ದೊರೆತಿರುವ ಒಟ್ಟು ಏಳು ಗೋಸಾಸಗಳಲ್ಲಿ ಎರಡು ರಾಷ್ಟ್ರಕೂಟರ ಒಂದನೆಯ ಕೃಷ್ಣನ ಕಾಲವಾದರೆ ಎರಡು ಅವನ ಹಿರಿಯಮಗನಾದ ಗೋವಿಂದನ ಕಾಲ ಮತ್ತು ಅವನ ಕಿರಿಯ ಮಗನಾದ ಧ್ರುವನ ಕಾಲಗಳಲ್ಲಿ ಹುಟ್ಟಿಕೊಂಡಿವೆ. ಮೇಲೆ ತಿಳಿಸಿರುವಂತೆ ಕೃಷ್ಣ ಮತ್ತು ಗೋವಿಂದರ ಹೆಸರುಗಳನ್ನು ಸಂಯುಕ್ತವಾಗಿ ಹೇಳುವ ಒಂದು ಶಾಸನ ಲಭ್ಯವಾಗಿದೆ. ಈ ಐದು ಶಾಸನಗಳನ್ನು ಹೊರತುಪಡಿಸಿ

ಇನ್ನುಳಿದ ಲಿಪಿಸಹಿತವಾದ ಎರಡು ಚಿಕ್ಕ ಗೋಸಾಸಗಳಲ್ಲಿ ರಾಷ್ಟ್ರಕೂಟ ಚಕ್ರವರ್ತಿಗಳ ಹೆಸರು ಕಂಡುಬರುವುದಿಲ್ಲ. ಬದಲು ಅವರ ಮಹಾಮಂಡಲೇಶ್ವರನಾಗಿ ಬನವಾಸಿ ಪ್ರಾಂತ್ಯವನ್ನು ಆಳುತ್ತಿದ್ದ ಮಾರಕ್ಕೆ ಅರಸನ ಹೆಸರು ಉಲ್ಲೇಖಿಸಲ್ಪಟ್ಟಿದೆ. ಬಹುಶಃ ಇವೆರಡು ಶಾಸನಗಳು ಒಂದನೆಯ ಕೃಷ್ಣನ ಕಾಲಾವಧಿಯವೇ ಆಗಿರಬಹುದು.

ಇಲ್ಲಿ ಆಶ್ಚರ್ಯಕರವಾದ ಒಂದು ಅಂಶ ಹುದುಗಿದೆ. ಮಾರಕ್ಕೆ ಅರಸನು ಚಾಲುಕ್ಯರ ಬಲವನ್ನು ಮುರಿಯುವುದರಲ್ಲಿ ಒಂದನೆಯ ಕೃಷ್ಣನಿಗೆ ತುಂಬಾ ಸಹಾಯ ಮಾಡಿದನು, ಈ ಮಾತಿಗೆ ಇಲ್ಲಿ ಕೊಟ್ಟಿರುವ ಒಂದನೆಯ ಶಾಸನದಲ್ಲಿ ಸ್ಪಷ್ಟವಾದ ಆಧಾರವಿದೆ. ಶಾಸನವು ಕೃಷ್ಣನನ್ನು "ಸ್ವಸ್ತ್ಯಕಾಲವರ್ಷ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ" ಎಂದು ಮೊದಲು ವಿಶೇಷಿಸಿ ಕೂಡಲೇ "ಅಕಾಲವರ್ಷ ಶ್ರೀ ಪೃಥ್ವೀವಲ್ಲಭ ಮಾರಕ್ಕೆಅರಸರ್" ಎಂದಿದೆ. ಎಂದರೆ ಮಾರಕ್ಕೆಅರಸನು ಚಕ್ರವರ್ತಿಗೆ ಸಲ್ಲಬಹುದಾಗಿದ್ದ ಗೌರವಾದರಗಳಿಗೆ ಪಾತ್ರನಾಗಿದ್ದನೆಂಬ ಅಂಶ ಇದರಿಂದ ಖಚಿತವಾಗುತ್ತದೆ. ಆದರೆ ಈತನ ಹೆಸರು ಗೋವಿಂದನನ್ನು ಉಲ್ಲೇಖಿಸುವ ಎರಡೂ ಶಾಸನಗಳಲ್ಲಿ ಇಲ್ಲ! ಬದಲು ಎಜೆ[ಯು]ರಸ ಎಂಬುವನು ಇಮ್ಮಡಿಗೋವಿಂದನ ಕೈಕೆಳಗೆ ಮಂಡಳೇಶ್ವರನಾಗಿ ಬನವಾಸಿ ಪ್ರಾಂತವನ್ನು ಆಳುತ್ತಿದ್ದನೆಂದು ಇಲ್ಲಿನ ಎರಡನೆಯ ಶಾಸನ ತಿಳಿಸುತ್ತದೆ. ಎಂದರೆ ಇಮ್ಮಡಿ ಗೋವಿಂದ ಯಾವುದೋ ಕಾರಣಕ್ಕಾಗಿ ಮಾರಕ್ಕೆ ಅರಸನನ್ನು ಅಧಿಕಾರವಂಚಿತಗೊಳಿಸಿ ಅವನ ಸ್ಥಾನದಲ್ಲಿ ಎರೆ[ಯು]ರಸನನ್ನು ನಿಯಮಿಸಿದ್ದು ಸ್ಪಷ್ಟವಾಗುತ್ತದೆ.*

ಈ ವಿಚಿತ್ರ ಇಷ್ಟಕ್ಕೇ ಕೊನೆಗಾಣುವುದಿಲ್ಲ. ಇಮ್ಮಡಿ ಗೋವಿಂದನ ತಮ್ಮನೂ ಮುಮ್ಮಡಿ ಗೋವಿಂದನ ತಂದೆಯೂ ಆದ "ಧಾರಾವರ್ಷ ಕಲಿವಲ್ಲಭ ನಿರುಪಮ ಧ್ರುವನ" ಕಾಲದಲ್ಲಿ ಪುನಃ ಮಾರಕ್ಕೆಅರಸನು ಬನವಾಸಿ ಮಂಡಲದ ಅಧಿಕಾರ ಪಡೆದನೆಂಬುದು ಇದೇ ಮುತ್ತಳ್ಳಿಯ ಇನ್ನೊಂದು ಗೋಸಾಸದಿಂದ ನಮಗೆ ಸ್ಪಷ್ಟವಾಗಿದೆ* ಬಹುಶಃ ಈ ಸಹೋದರರ ಮೇಲಾಟದಲ್ಲಿ ಮಾರಕ್ಕೆ ಅರಸ ತಮ್ಮನ ಪಕ್ಷ ವಹಿಸಿದ್ದೇ ಕಾರಣವಾಗಿ ಇಮ್ಮಡಿ ಗೋವಿಂದನ ಕಾಲದಲ್ಲಿ ಅಧಿಕಾರ ವಂಚಿತನಾಗಬೇಕಾಯಿತು. ಧ್ರುವನು ರಾಷ್ಟ್ರಕೂಟ ಸಿಂಹಾಸನದ ಅಧಿಕಾರ ಪಡೆದುಕೊಂಡದ್ದರಿಂದ ಮಾರಕ್ಕೆಅರಸನು ಪುನಃ ಬನವಾಸಿ ಪ್ರಾಂತದ ಮಂಡಲೇಶ್ವರತ್ವ ಪಡೆದುಕೊಂಡಿದ್ದಾನೆ.

ಮಾರಕ್ಕೆ ಅರಸನನ್ನು ಹೆಸರಿಸುವ ಒಂದು ಶಾಸನ—ಸೌ. ಇಂ. ಇ. XX, ಸಂ. 10ರಲ್ಲಿ ಮತ್ತು ಇನ್ನೊಂದು ಶಾಸನ ಎಪಿ. ಇಂ. VI, ಪು. 162ರಲ್ಲಿ ಈ ಮುಂಚೆ

* ಈ ಎಜೆರಸಮ್ಮನನ್ನು ಸಿರಗುಂಬಿಯ ಒಂದು ಶಾಸನ ಕೂಡ ಹೆಸರಿಸಿದ್ದು ಅವನು ಜಗತ್ತುಂಗನ ಅಧೀನನಾಗಿ ಬನವಾಸಿ ಪ್ರಾಂತ ಆಳುತ್ತಿದ್ದನೆಂದಿದೆ. ಎಂದರೆ ಈ ಸಿರಗುಂಬಿ ಶಾಸನಕೂಡ ಇಮ್ಮಡಿ ಗೋವಿಂದನ ಕಾಲದ್ದೆಂದು ಹೇಳಬಹುದಾಗಿದೆ. ನೋಡಿ ಕೆ. ಆರ್. ಐ. ಪ್ರೊ. 1953–57 ಪುಟ–69.

ಪ್ರಕಟವಾಗಿದೆಯಾದರೂ ಅವೆರಡರಿಂದ ಈತನ ಬಗ್ಗೆ ಯಾವ ಹೆಚ್ಚಿನ ಅಂಶಗಳೂ ಬೆಳಕಿಗೆ ಬಂದಿಲ್ಲ, ಪ್ರಸ್ತುತ ಇಲ್ಲಿನ ಒಂದನೆಯ ಶಾಸನದಲ್ಲಿ ಈತ ಸೇನಾವರ ಮನೆತನದವನೆಂಬುದು ಸ್ಪಷ್ಟವಾಗಿದೆ. ಈ ಅಂಶವನ್ನು ಸ್ಪಷ್ಟಪಡಿಸುವ ಇನ್ನೂ ಕೆಲವು ದಾಖಲೆಗಳು ಬೆಳಕಿಗೆ ಬಂದಿವೆ. ಈ ಸೇನಾವರ ಅಥವಾ ಸೇಣವಾರರು ಕರ್ನಾಟಕದ ಬಹು ಪ್ರಾಚೀನವಾದ ರಾಜಮನೆತನಕ್ಕೆ ಸೇರಿದವರಾಗಿದ್ದು, ಈಗಿನ ಶಿವಮೊಗ್ಗ, ಚಿಕ್ಕಮಂಗಳೂರು ಜಿಲ್ಲೆ ಪ್ರದೇಶದಲ್ಲಿ ನೆಲೆಸಿದ್ದರೆಂದು ತಿಳಿಯಬಹುದು. ಈ ಸೇಣವಾರರ ಕೆಲಹೆಸರುಗಳು ಅಲ್ಲಲ್ಲಿ ಕಂಡುಬರುತ್ತವೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕೂಡ ಇವರ ಮನೆತನ ಅಸ್ತಿತ್ವದಲ್ಲಿದ್ದ ಬಗ್ಗೆ ಶಾಸನೋಲ್ಲೇಖಗಳಿವೆ. ಆದರೆ ಅವರಲ್ಲೆಲ್ಲ ಅತ್ಯಂತ ಪ್ರಮುಖನೂ ರಾಷ್ಟ್ರಕೂಟ ಚಕ್ರವರ್ತಿ ೧ನೆಯ ಕೃಷ್ಣನಿಗೆ ಸಮಬಲನೂ ಆಗಿದ್ದ ಮಾರಕ್ಕೆಅರಸನ ಬಗ್ಗೆ ಖಚಿತ ಮಾಹಿತಿಯು ಮುತ್ತಳ್ಳಿಯ ಈ ಶಾಸನಗಳಿಂದ ಈಗ ಲಭ್ಯವಾಗಿದೆ.

ಹೆಸರುಗಳನ್ನು ನೇರವಾಗಿ ಹೇಳುವ ರಾಷ್ಟ್ರಕೂಟ ೧ನೆಯ ಕೃಷ್ಣನ ಕನ್ನಡ ಶಾಸನಗಳ ಸಂಖ್ಯೆ ಇದೀಗ ಮೂರಕ್ಕೆ ಏರಿದಂತಾಗಿದೆ. ಈ ಮೊದಲು ಪತ್ತಿಮತ್ತೂರಿನ ಶಾಸನವೊಂದು ಮಾತ್ರ ಅವನ ಕನ್ನಡ ಶಾಸನವಾಗಿತ್ತು.*[1] ಅದೇ ರೀತಿ ಇಮ್ಮಡಿ ಗೋವಿಂದನ ಕಾಲದ ಎರಡು ಕನ್ನಡ ಶಾಸನಗಳು ಈಗ ಸಿಕ್ಕಂತಾಗಿವೆ. ಧ್ರುವ ಮತ್ತು ಮುಮ್ಮಡಿ ಗೋವಿಂದರ ಕಾಲದ ಕನ್ನಡ ಶಾಸನಗಳ ಸಂಖ್ಯೆ ಹೆಚ್ಚಾಗಿರುವುದು ವಿದ್ವಾಂಸರಿಗೆ ತಿಳಿದೇ ಇದೆ.

ಇಲ್ಲಿನ ಎರಡು ಗೋಸಾಸನಗಳಲ್ಲಿ ಆದಿತ್ಯಸೇನ ಪಂಡಿತನೆಂಬುವನು ಹೆಸರಿಸಲ್ಪಟ್ಟಿದ್ದಾನೆ, ಇದೇ ರೀತಿ ಇಲ್ಲಿನ ಇನ್ನೊಂದು ಶಾಸನದಲ್ಲಿ ಚಂದ್ರಸೇನ ಪಂಡಿತನೆಂಬವನ ಹೆಸರು ಉಲ್ಲೇಖಿತವಾಗಿದೆ.*[2] ಇವರು ಈ ಗೋಸಾಸ ದಾನ ವಿಷಯಕ್ಕೆ ಯಾವುದೇ ಒಂದು ರೀತಿಯಲ್ಲಿ ಸಂಬಂಧಪಟ್ಟಿರುವುದಂತೂ ಸ್ಪಷ್ಟ. ಬಹುಶಃ ಇವರೇ ಪ್ರತಿಗ್ರಹಿಗಳೆಂದು ತೋರುತ್ತದೆ. ಕಾರಣ ಗೋಸಹಸ್ರದಾನ ಪಡೆಯುವವರು ಜೈನರಾಗಿದ್ದರೆಂದು ಇಲ್ಲಿ ಊಹಿಸಬೇಕಾಗಿದೆ. ಹೀಗೆ ಮುತ್ತವಳ್ಳಿಯ ಈ ಗೋಸಾಸಗಳು ತುಂಬ ಮಹತ್ವಪೂರ್ಣವಾದ ಐತಿಹಾಸಿಕ ದಾಖಲೆಗಳಾಗಿವೆ.

ಶಾಸನ ಪಾಠಗಳು :

---

* ಇದರ ಪಾಠವನ್ನು 'ಸಾಗರಖಂಡ–70 ಒಂದು ಅಧ್ಯಯನ (ಡಾ. ಭೋಜರಾಜ ಪಾಟೀಲ) ಇವರ ಅನುಬಂಧದಲ್ಲಿ ನೋಡಬಹುದು. ನೂಲಗೇರಿ ಶಾಸನ (KRI. Pr-Report 1953-57-P. 68)ದಲ್ಲಿ ಈ ಮಾರಕ್ಕೆ ಅರಸ ಮತ್ತು ಗೋವಿಂದ ಇಬ್ಬರ ಹೆಸರುಗಳೂ ಕಂಡು ಬಂದಿರುವುದರಿಂದ ಈ ಶಾಸನ ಕಾಲದಲ್ಲಿ ಇಮ್ಮಡಿ ಗೋವಿಂದನ ವಿಶ್ವಾಸ ಪಾತ್ರನಾಗಿ ಮಾರಕ್ಕೆಯರಸ ಅಧಿಕಾರದಲ್ಲಿದ್ದನೆನ್ನಬಹುದು.

1* E. I. VI P. 161.

2* ಜೈನಪರವಾದ ಹೆಸರುಗಳೆಂಬಲ್ಲಿ ಸಂಶಯವೇ ಇಲ್ಲ.

**ಮುತ್ತಳ್ಳಿಯ ಗೋಸಾಸಗಳು. (ಶಿಕಾರಿಪುರ ತಾಲ್ಲೂಕು)**

## I. ರಾಷ್ಟ್ರಕೂಟರ ಒಂದನೆಯ ಕೃಷ್ಣ ಕಾಲ ಸು. 770 A.D.

1. ಸ್ವಸ್ತ್ಯಕಾಲವರ್ಷ ಶ್ರೀ ಪೃಥುವೀ ವಲ್ಲಭ ಮಹಾರಾಜಾಧಿರಾಜ ಪ
2. ರಮೇಶ್ವರ ಭಟರರಾ ಪೃಥವೀ ಯಾನ್ಸೇಕಚ್ಛತ್ರ ಚ್ಛಾಯೆಯಿನ್ಸರಿ ಪಾ
3. ಲಿಸೆ ಅಕಾಲವರ್ಷ ಶ್ರೀ ಪೃಥುವೀ ವಲ್ಲಭಸೇನಾವರ ಮಾರಕ್ಕೆ ಅರಸರ್ಬ್ಬನ್
4. ವಾಸಿ ಪನ್ನಿರ್ಚ್ಛಾಸಿರವಾನಾಳೆ ಆದಿತ್ಯಸೇನ ಪಂಪಿತರ್ಕರ್ನಸ್ಪ ಮಗಾ (ಮಾರಾ)ಳೆ ಸ
5. ಯ್ಯಾಯ ಗಾಮುಣ್ಣ ಗೋಸಾಸಮಿ ಟ್ಟು ಪೂದೋೞ್ದು [ಬಿ]ಟ್ಟು ಮೋಣ್ಪೆ ನಿಱಿಸಿದಾ [ಸಾಸ]ನಂ
6. ಪ...ರನಾ ಮಗನ್ಬಲ್ಲುಶಂ ಮಾಡಿದಾನ್

## II. ರಾಷ್ಟ್ರಕೂಟ ಒಂದನೆಯ ಕೃಷ್ಣ ಮತ್ತು ಇಮ್ಮಡಿ ಗೋವಿಂದ. ಕಾಲ ಕ್ರಿ. ಶ. ಸು. 775 A.D.

1. ಸ್ತಿ ಪ್ರಭೂತ ವರ್ಷ ಶ್ರೀ ಪೃಥುವೀ ಮಹಾರಾಜಾಧಿರಾಜ
2. ತನ್ಸರ ಭಟರಗೊಣ್ಡೇಯಿನ್ಸ ರಸಪ್ರಿಥುವಿ ರಾಜ್ಯಙ್ಗೆಯೆ ಎಱೆ ×
3. ರಸಬ್ಬನವಾಸಿ ನಾಡಾಳೆ ಆದಿತ್ಯಸೇನ ಪಣ್ಡಿತರ್ಕನ್ಸವಾ × ×
4. ಸನ್ದಿಗರಾ ಸಿರಿದೇವನಾ ಮಗಂ ಸಿರಿಕನ್ದರ್ಪ್ಪ ದೋರಾಪ
5. ದಲ್ದಾನ ಮಂಗೊಟ್ಟು...ಣ್ಣಿ...ಟ್ಟು
6. ನಿಱಿಸಿದಾನ್...

## III. ರಾಷ್ಟ್ರಕೂಟ ಇಮ್ಮಡಿ ಗೋವಿಂದ. ಕಾಲ ಸು. 780 . D

1. ಸ್ವಸ್ತಿ ಪ್ರಭೂತ ವರ್ಷ ಶ್ರೀ ಪೃಥವೀ ವಲ್ಲಭ ಮ...
2. ರಾಜ ಪರಾಮೇಶ್ವರ ಭಟರಗೊಣ್ಡೇಯಿನ್ಸರಸ ಪ್ರಿಥುವಿ ರಾಜ್ಯಂ [ಗೆ]
3. ...ರಸಬ್ಬನವಾಸೆ ನಾಡಾಳೆ ಆದಿತ್ಯಸೇನ ಪಣ್ಡಿತರ್ಕನ್ಸ...
4. ದನದೇವ ಕೊಣ್ಡಿಸರಾ ಮಗನ್
5. ಸಿರಿದೇವನ್ ಪೂದೋರೂಪದ
6. ಲ್ದಾನ [ಸು ?]ಸಮುಣ್ಣ ಕೊಟ್ಟುನಿ
7. ಱಿಸಿದಾ ಮೋಣ್ಪು.

# ಪಂಪಭಾರತದಲ್ಲಿ ಕಂಡುಬರುವ ಜೈನ ಅಂಶಗಳು

ಶಾಂತಿನಾಥ ಎ. ದಿಬ್ಬದ

'ಜಾತಿಯೊಳೆಲ್ಲಮುತ್ತಮದ ಜಾತಿಯು ವಿಪ್ರಕುಲಂಗೆ ನಂಬಲೇ
ಮಾತೊ ಜಿನೇಂದ್ರ ಧರ್ಮಮೆ ವಲಂ ದೊರೆ ಧರ್ಮದೊಳೆಂದು ನಂಬಿ ತ
ಜ್ಜಾತಿಯ ನುತ್ತರೋತ್ತರಮೆ ಮಾಡಿ ನೆಗಳ್ಚಿದ ನಿಂತಿರಾತ್ಮವಿ
ಖ್ಯಾತಿಯನಾತನಾತನ ಮಗಂ ನೆಗಳ್ದಂ ಕವಿತಾಗುಣಾರ್ಣವಂ ॥'

ಎಂಬ ಪದ್ಯದಲ್ಲಿ ಮೊದಲು ವೈದಿಕರಾಗಿದ್ದ ತನ್ನ ಪೂರ್ವಜರು ತನ್ನ ತಂದೆಯ ಕಾಲದಲ್ಲಿ ಜೈನ ಧರ್ಮವನ್ನು ಸ್ವೀಕರಿಸಿದ ಬಗ್ಗೆ ಪಂಪ ತಿಳಿಸಿದ್ದಾನೆ. ಈ ಮತಾಂತರ ದಿಂದಾಗಿ ಪಂಪನಲ್ಲಿ ಇಬ್ಬಗೆಯ ಧರ್ಮ ಸಂಸ್ಕಾರಗಳು ಸಮಾವೇಶಗೊಂಡವು. ಇದರಿಂದಾಗಿ ಅವನಲ್ಲಿ ತಾತ್ವಿಕ ಗೊಂದಲವಾಗಲೀ,–ದ್ವೇಷವಾಗಲಿ ಉಂಟಾಗಲಿಲ್ಲ. ಅಂತೆಯೇ ಸಂಸ್ಕಾರದ್ವಯಗಳ ಶ್ರೀಮಂತ ವ್ಯಕ್ತಿತ್ವ ಪಂಪನದಾಯಿತು ಎಂಬ ವಿಮರ್ಶಕರ ಹೊಗಳಿಕೆಗೆ ಆತ ಪಾತ್ರನಾದ.

ಒಂದೆಡೆ ಆಗಮಿಕವನ್ನು ಸಾರುವ ಆದಿಪುರಾಣವನ್ನು ರಚಿಸಿದ ಪಂಪ ಇನ್ನೊಂದೆಡೆ ಲೌಕಿಕವನ್ನು ಸಾರುವ ಭಾರತವನ್ನು ಬರೆದಿರುವುದು ಅವನ ಸಮನ್ವಯ ಧೋರಣೆಯನ್ನೇ ಸಾರುವಂತಿದೆ. ಆಗಮಿಕಕ್ಕೆ ಜೈನ ಸರಣಿಯ ಕಥೆಯನ್ನು ಎತ್ತಿಕೊಂಡ ಪಂಪ ಲೌಕಿಕಕ್ಕೂ ಅಂಥದ್ದೇ ಒಂದು ಜೈನ ಕಥೆಯನ್ನು ಎತ್ತಿಕೊಳ್ಳಬಹುದಾಗಿತ್ತು. ಆದರೆ ಅದರ ಬದಲು ಆತ ವೈದಿಕ ಸರಣಿಯ ಕಥೆಯನ್ನು ಬಳಸಿಕೊಂಡು ! ಹರಿವಂಶ ಪುರಾಣ ಮೊದಲಾದ ಜೈನ ಭಾರತ ಕಥೆಗಳು ತನಗೆ ಪರಿಚಿತವಿದ್ದರೂ ಆತ ವೈದಿಕ ಪರಂಪರೆಯ ಕಥೆಯನ್ನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಅಳವಡಿಸಿಕೊಂಡಿರುವುದಕ್ಕೆ ಅನೇಕ ಕಾರಣಗಳನ್ನು ಊಹಿಸಲಾಗುತ್ತದೆ. "ಆಶ್ರಯ ದಾತನಾದ ಅರಿಕೇಸರಿಯ ಅಪೇಕ್ಷೆ ಹಾಗಿದ್ದಿರಬಹುದು. ವ್ಯಾಸಭಾರತದೊಂದಿಗೆ ಹರಿವಂಶ ಪುರಾಣ ಭಾಗವಾದ ಜೈನಭಾರತದ ಕಥೆ ಹೇಗೂ ಸರಿಗಟ್ಟಲಾರದೆಂದು ಅವನು ಭಾವಿಸಿರಬಹುದು. ತನ್ನ ಕಾಲದ ಸಾಮಾಜಿಕ ಸ್ಥಿತಿಗತಿಗಳ ಅರಸು ಮನೆತನಗಳ ಹೋರಾಟಗಳ, ರಾಜನೈತಿಕ ಸೂಕ್ಷ್ಮಗಳ ಚಿತ್ರಣಕ್ಕೆ ವ್ಯಾಸ ಭಾರತದ ಸಹಜ ವಿನ್ಯಾಸದ ಕಥೆ ಬಳ್ಳಿಯ ವೇದಿಕೆಯಾಗುವ ಹಾಗೆ ಭವಾವಳಿಗಳೂ, ವಿವಾಹ ವೃತ್ತಾಂತಗಳೂ ಉಪಖ್ಯಾನಗಳೂ ತುಂಬಿಕೊಂಡ ಪ್ರಾಪಂಚಿಕ ವಿಷಯಗಳ ಬಗ್ಗೆ ಅನಾಸಕ್ತಿಯನ್ನು ವೈರಾಗ್ಯವನ್ನು ಬೋಧಿಸುವ ಜೈನಭಾರತದ ಕಥೆ ವೇದಿಕೆಯಾಗ

ಲಾರದೆಂಬುದು ವಿದಿತವೇ ಇವೆ.[1] ತಲೆ ತಲಾಂತರದಿಂದ ತನ್ನ ಪೂರ್ವಜರು ಪಾಲಿಸಿಕೊಂಡು ಬಂದ ವೈದಿಕ ಮತದ ಮೇಲಿನ ಪಂಪನ ಮಮತೆಯೂ ಈ ವಸ್ತುವಿನ ಆಯ್ಕೆಗೆ ಕಾರಣವಾಗಿರಬಹುದು. ಅಥವಾ ಜೀವನವನ್ನು ಕೇವಲ ನಿವೃತ್ತಿ ಭಾವನೆಯಿಂದ ನೋಡುವ ಜೈನ ಕೃತಿಗಳ ಧೋರಣೆಯನ್ನು ಪ್ರವೃತ್ತಿ ಪರನಾದ ಲೌಕಿಕ ವ್ಯಕ್ತಿಯಾದ ತನ್ನ ಕಥಾನಾಯಕನಿಗೆ ಆರೋಪಿಸುವುದು ಸರಿಯಾಗ ಲಾರವೆಂಬ ಕಾರಣದಿಂದಲೂ ಪಂಪ ಹೀಗೆ ಮಾಡಿರಬಹುದು. ಅಲ್ಲದೆ ವೈಯುಕ್ತಿಕ ವಾಗಿ ಕೂಡಾ ಜೀವನಾಸಕ್ತಿಯಿಂದ ಕೂಡಿದ ವ್ಯಕ್ತಿಯಾಗಿದ್ದುದೂ ಇದಕ್ಕೆ ಕಾರಣ ವಾಗಿರಬಹುದು.

ಕಾರಣವೇನೇ ಇದ್ದರೂ ಆತ ವೈದಿಕ ಸರಣಿಯ ಭಾರತವನ್ನು ಆಯ್ದುಕೊಂಡ ದ್ದಂತೂ ಸರ್ವವಿದಿತ. ಆದರೂ ಸಹಿತ ಸೂಕ್ಷ್ಮವಾಗಿ ನೋಡಿದಾಗ ಪಂಪಭಾರತದ ಕೆಲವು ಪ್ರಸಂಗಗಳ ಹಿಂದೆ ಜೈನ ಪ್ರಕ್ರಿಯೆಗಳ ಛಾಯೆಯಿರುವುದನ್ನು ಗುರುತಿಸ ಬಹುದು. ಅಂಥ ಒಂದು ಪ್ರಯತ್ನ ಈ ಲೇಖನ.

ಲೇಖನದ ಆರಂಭದಲ್ಲಿ ಕೊಡಲಾದ ಪದ್ಯವೇ ಪಂಪನ ಜೈನ ಪರವಾದ ಧೋರಣೆಯನ್ನು ಸಾಬೀತು ಗೊಳಿಸುತ್ತದೆ. ಅವನ ಪ್ರಕಾರ ಬ್ರಾಹ್ಮಣ್ಯ ಒಂದು ಜಾತಿ. ಎಲ್ಲ ಜಾತಿಗಲ್ಲಿಯೂ ಉತ್ತಮವಾದುದು. ಹಾಗೆಯೇ ಜೈನತ್ವ ಒಂದು ಧರ್ಮ. ಎಲ್ಲ ಧರ್ಮಗಳಲ್ಲಿ ದೊರೆಯಂತಿರುವುದು. ಬ್ರಾಹ್ಮಣವೆಂಬ ಜಾತಿಯಿಂದ ಜೈನವೆಂಬ ಧರ್ಮವನ್ನು ಸ್ವೀಕರಿಸುವ ಮೂಲಕ ತನ್ನವರು ಬ್ರಾಹ್ಮಣ್ಯಕ್ಕೆ ಕೀರ್ತಿ ತಂದರು ಎಂಬುದು ಪಂಪನ ಭಾವ. ಆತನು ಬರೆಯುತ್ತಿರುವ ಕೃತಿ ವೈದಿಕ ಪರವಾದುದಾದರೂ ಆತನ ಮನಸ್ಸಿನಲ್ಲಿ ಸದಾ ಜಾಗೃತವಾಗಿರುವ ಜೈನತ್ವ ಹೀಗೆ ಅಲ್ಲಲ್ಲಿ ಇಣುಕಿ ನೋಡಿದೆ. ಅಹಿಂಸಾ ಪರವಾದ ಧೋರಣೆಯನ್ನು ಸ್ಪಷ್ಟಪಡಿಸುವ ಇನ್ನೊಂದು ಪ್ರಸಂಗವೆಂದರೆ ಆತ ತನ್ನ ಪೂರ್ವಜನಾದ ಮಾಧವ ಸೋಮಯಾಜಿಯ ಬಗ್ಗೆ "ತನ್ನಧ್ವರಧೂಮದೆ ಕರಿದು ಮಾಡಿದಂ ನಿಜಯಶಮಂ"[2] ಎಂದಿರುವುದು. ಇನ್ನೊಂದೆಡೆ ತನ್ನ ವ್ಯಕ್ತಿತ್ವ ಸ್ವಭಾವಗಳ ಬಗ್ಗೆ ತಿಳಿಸಿದ ಪಂಪ ತಾನು 'ಅಪಗತಪಾಪ'[3] ನಾಗಿದ್ದನೆಂದು ಹೇಳಿರುವುದನ್ನು ನಾವಿಲ್ಲಿ ಗಮನಿಸಬೇಕು. ಇವಿಷ್ಟೂ ಭಾರತದ ಹೊರಗಿನ ಆದರೆ ಪಂಪನ ಜೈನ ಪರ ನಿಲುವನ್ನು ಸ್ಪಷ್ಟ ಪಡಿಸುವ ಮಹತ್ವದ ಅಂಶಗಳು.

ಇನ್ನು ಭಾರತದ ಕಥಾವಸ್ತುವಿನ ಕಕ್ಷೆಯೊಳಗೆ ಪಂಪನ ಜೈನಪರ ನಿಲುವನ್ನು ಸೂಚಿಸುವ ಮತ್ತೆ ಕೆಲವು ಪ್ರಸಂಗಗಳನ್ನು ಹೀಗೆ ಗುರುತಿಸಬಹುದು : "ದ್ರೌಪದಿ

---

1 ಪಂಪ - ಟಿ. ವಿ ವೆಂಕಟಾಚಲಶಾಸ್ತ್ರಿ ಪು. ೫೭

2 ಪಂ. ಭಾ. ೧೪-೪೪

3 ಪಂ. ಭಾ. ೧೪-೪೯

ಅರ್ಜುನನೊಬ್ಬನಿಗೇ ಪತ್ನಿಯೆಂಬ ಬಹುಮುಖ್ಯವಾದ ಮಾರ್ಪಾಡು ಜೈನ ಭಾರತದ ಮೂಲವಾದುದೇ ಆಗಿದೆ. ಅರ್ಜುನನ ಪ್ರತಾಪ ವಿದ್ಯೆಗಳು ಕೌರವರ ಅಸಹನೆಗೆ ಕಾರಣವಾಗಿದ್ದುವೆಂದು ಅಲ್ಲಿಯೇ (ಹರಿವಂಶ ಪುರಾಣ-ಸರ್ಗ-೪೫) ಬಂದಿರುವುದನ್ನು ಪಂಪ ಅತಿಶಯಿಸಿರುವುದು ಸಹಜವಾಗಿಯೇ ಇದೆ".[1]

ಕಥಾನಾಯಕನಾದ ಅರ್ಜುನನ ಜನನದ ವೃತ್ತಾಂತ ಸಂಪೂರ್ಣವಾಗಿ ಜೈನ ತೀರ್ಥಂಕರನೊಬ್ಬನ ಜನ್ಮಾಭಿಷೇಕ ಕಲ್ಯಾಣವನ್ನು ಹೋಲುತ್ತದೆ. ತೀರ್ಥಂಕರನ ತಾಯಿಯಾಗಲಿರುವ ಸ್ತ್ರೀಗೆ ಬೆಳಗಿನ ಜಾವದಲ್ಲಿ ಹದಿನಾರು ಶುಭ ಸ್ವಪ್ನಗಳು ಬೀಳುತ್ತಿದ್ದವೆಂಬ ಜೈನ ನಂಬಿಕೆಯೇ ನಾಯಕನ ತಾಯಿಯಾಗಲಿರುವ ಕುಂತಿಗೂ ಕನಸು ಬಿದ್ದವೆಂದು ಹೇಳಿಸಿದಂತಿದೆ.

> 'ಕುಡಿವುದನೇಟಿಮಂಬುಧಿಯುಂ ಕುಲಶೈಲಕುಳಂಗಳಂ ತಗು
> ಳ್ದಡರ್ವುದನೊಂದು ಬಾಳ ರವಿ ತನ್ನಯ ಸೋಗಿಲ ಮೇಗೆ ರಾಗದಿಂ
> ಪೊಡರ್ವುದನಂತೆ ದಿಕ್ಕರಿಗಳಂಭುಜ ಪತ್ರ ಪುಟಾಂಬುವಿಂ ಬೆಡಂ
> ಗಡಸಿರೆ ಮಜ್ಜನಂಬುಗಿಪುದಂ ಸತಿ ಕಂಡೊಸೆದಳ್ ನಿಶಾಂತದೊಳ್ ॥'[2]

ಸಾತ್ವಿಕ ರಾಜನೋರ್ವನ ಜನನದ ಪೂರ್ವ ಸೂಚನೆಗಳಂತಿರುವ ವಿಷಯಗಳು ಆ ತಾಯಿಗೆ ಕನಸಿನಲ್ಲಿ ಗೋಚರಿಸಿದವೆಂಬ ಸಂದರ್ಭೋಚಿತವಾದ ಪಂಪನ ಬದಲಾವಣೆ ಆತನ ಸಾಮಾಜಿಕ ಪ್ರಜ್ಞೆಗೆ ಮತ್ತು ಕವಿ ಪ್ರಜ್ಞೆಗೆ ಸಾಕ್ಷಿ. ತೀರ್ಥಂಕರನ ಜನನದ ಮುನ್ನ ಆತನ ತಾಯಿಗೆ ಕನಸಿನಲ್ಲಿ ಗೋಚರಿಸುವ ವಿಷಯಗಳು ಬೇರೆ ಎಂಬುದನ್ನು ನಾವಿಲ್ಲಿ ಗಮನಿಸಬೇಕು.

ಇಂಥ ಅಮೋಘನಾದ ಮಗನನ್ನು ಪಡೆಯ ಬಯಸಿದ ಆ ದಂಪತಿಗಳು ಉಪವಾಸ–ನೋಂಪಿಗಳನ್ನು ಕೈಗೊಂಡರೆಂಬ ಮಾತೂ[3] ಮೇಲಿನ ಪ್ರಸಂಗಕ್ಕೆ ಪೂರಕವಾದುದು ಕಥಾನಾಯಕನ ಜನ್ಮೋತ್ಸವವನ್ನು ಪಂಪ ಹೇಗೆ ವರ್ಣಿಸಿದ್ದಾನೆ, ನೋಡಿ:

> 'ಉದಯಿಸುವುದುಮಮೃತಾಂಶುವಿ
> ನುದಯದೊಳಂಭೋಧಿ ವೇಲೆ ಭೋರ್ಗರೆವವೊಲೊ
> ರ್ಮೊದಲೆಸೆದುವು ಘನ ಪಥದೊಳ್
> ತ್ರಿದಶ ಕರಾಹತಿಯಿನೊಡನೆ ಸುರದುಂದುಭಿಗಳ್ ॥[4]

ಬೆಳದಿಂಗಳಿನಲ್ಲಿ ಸಮುದ್ರದ ಅಲೆಗಳು ಅರ್ಭಟ ಮಾಡುವ ಹಾಗೆ ಆಕಾಶದಲ್ಲಿ ದೇವತೆಗಳು ಮಂಗಳ ವಾದ್ಯ ಮೊಳಗಿಸಿ ಚಪ್ಪಾಳೆ ತಟ್ಟಿ ತಮ್ಮ ಸಂತೋಷ ವ್ಯಕ್ತಪಡಿಸಿದರಂತೆ !

---

1 ಪಂಪ - ಟಿ. ವಿ. ವೆಂಕಟಾಚಲಶಾಸ್ತ್ರಿ ಪು. ೫೭
2 ಪಂ. ಭಾ. ೧–೧೪೦
3 ಪಂ. ಭಾ_೧–೧೩೫, ೧೩೭
4 ಪಂ. ಭಾ–೧–೧೪೭

"ಅಂತು ಮೊಟಗುವ ಸುರ ದುಂದುಭಿಗಳಂ ಪರಸುವ ಜಯ ಜಯ ಧ್ವನಿಗಳುಂ ಬೆರಸು ದೇವೇಂದ್ರಂ ಬರೆ ದೇವವಿಮಾನಗಳೆಲ್ಲಂ ಶತಶೃಂಗ ಪರ್ವತಮಂ ಮುಸುಟಿಕೊಂಡು

> ದೇವರ ಪಟಿಗಳ ರವದೊಳ್
> ದೇವರ ಸುರಿವರಲ ಸರಿಯ ಬೆಳ್ಸರಿಯೊಳ್ ತ
> ದ್ದೇವ ವಿಮಾನಾವಳಿಯೊಳ್
> ತೀವಿದುದೊರ್ಮೊದಲೆ ಗಗನದಿಂ ಧರೆ ಮಧ್ಯಂ ॥"[1]

ಎಂಬ ಮೇಲಿನ ಪದ್ಯಭಾಗಗಳಲ್ಲಿ ಪಂಪ ತಿಳಿಸಿರುವ ಸುರದುಂದುಭಿ, ಸುರ ಪುಷ್ಪವೃಷ್ಟಿ, ದೇವತೆಗಳ ಜಯಘೋಷ, ದೇವನೃತ್ಯ, ಈ ಮೊದಲಾದುವೆಲ್ಲಾ ಜೈನ ತೀರ್ಥಂಕರನ ಜನನದ ಕಾಲದಲ್ಲಿ ಜರುಗುತ್ತಿದ್ದವೆನ್ನಲಾದ ಪಂಚಾಶ್ಚರ್ಯಗಳ ಪ್ರಭಾವದಿಂದಲೇ ಮೈದಾಳಿದಂತಿವೆ. ಪಂಪ ಭಾರತದಲ್ಲಿ ಪದೇ ಪದೇ ಬಂದಿರುವ ದೇವವಿಮಾನಗಳ ಕಲ್ಪನೆಯೂ ಜೈನ ಕಲ್ಪನೆಯೇ ಆಗಿದೆ. ಆದಿಪುರಾಣದ ಪಾಂಡುಕ ಶಿಲೆಯೇ ಇಲ್ಲಿಯ ಶತಶೃಂಗ ಪರ್ವತವಾದಂತಿದೆ. ತೀರ್ಥಂಕರರ ಬದುಕಿನ ಅಭ್ಯುದಯ ಪ್ರಸಂಗಗಳಲ್ಲಿ ಇಂದ್ರ ತನ್ನ ಬಳಗದೊಂದಿಗೆ ಬಂದು ಸಂತಸದಲ್ಲಿ ಭಾಗಿಯಾಗುತ್ತಿದ್ದಂತೆಯೇ ಇಲ್ಲಿಯ ಕಥಾನಾಯಕನ ಅಭ್ಯುದಯ ಪ್ರಸಂಗಗಳಲ್ಲಿಯೂ ಇಂದ್ರ ಪರಿವಾರ ಸಮೇತವಾಗಿ ಬರುತ್ತಾನೆ.

ಪುನರ್ಜನ್ಮದಲ್ಲಿ ಜೈನರಿಗೆ ನಂಬಿಕೆಯುಂಟು. ಅಷ್ಟೇ ಅಲ್ಲ ಹಿಂದಿನ ಜನ್ಮಗಳ ನೆನಪು ಕೆಲವರಿಗೆ ಉಂಟಾಗುತ್ತದೆಯೆಂದೂ ಕೆಲವರು ಭಾವಿಸುತ್ತಾರೆ. ಅದನ್ನವರು 'ಜಾತಿಸ್ಮರತ್ವ'ವೆಂದು ಕರೆಯುತ್ತಾರೆ. ಅರ್ಜುನನು ಕೃಷ್ಣನ ಹಲವು ಜನ್ಮಗಳ ಗೆಳೆಯನೆಂದೂ, ಆತ ತನ್ನಲ್ಲಿ ಬರುತ್ತಿರುವುದನ್ನು ಸೂಚಿಸುವ ರೀತಿಯಲ್ಲಿ ಕೃಷ್ಣನ ದೇಹದ ಬಲ ಭಾಗಗಳು ಅದುರಿದವೆಂದೂ ಪಂಪ ತಿಳಿಸಿರುವಲ್ಲಿ ಬಹುಶಃ ಈ ಪುನರ್ಜನ್ಮ ಮತ್ತು ಜಾತಿಸ್ಮರತ್ವಗಳ ಛಾಯೆಯಿದೆ.[2] ಈ ಪ್ರಸಂಗ ಮೂಲ ಭಾರತದಲ್ಲಿ ಇಲ್ಲದೆ ಕೇವಲ ಪಂಪನಲ್ಲಿ ಮಾತ್ರ ಬಂದಿರುವುದು ಗಮನಾರ್ಹ.

ಪಾಂಡುವಿನ ಮರಣದಿಂದಾಗಿ ದುಃಖಿಸುತ್ತಿದ್ದ ಕುಂತಿಯನ್ನು ಸಂತೈಸುವ ತಪೋವೃದ್ಧರ ಮಾತುಗಳನ್ನು ಕೇಳಿ :

> "ಕಟಿದವರ್ಗಟ್ಟಿದಟ್ಟಿದವರೇಟ್ಟಿದವಾಂತವರಿಂ ಬಟಿಕ್ಕೆ ತಾ
> ಮುಟಿಪ್ಪೊಡಮೋಬರುಂತವರ್ಗಾಳು ತಮಗಂ ಬರ್ಪಕೆಲ್ಲ ಧರ್ಮಮಂ
> ಗಟಿಯಿಸಿ ಕೊಳ್ವುದೊಂದೆ ಚದುರಿಂತುಟಿಂ ಸಂಸ್ಕೃತಿ ಧರ್ಮವೇಕೆ ಬಾ
> ಯ್ಬಿಟಿಪುದಿದೇಕೆ ಚಿಂತಿಸುವುದೇಕೆ ಪಲುಂಬುವುದೇಕೆ ನೋವುದೋ ॥[3]

---

1 ಪಂ. ಭಾ–೧–೧೪೬ ವ ಮತ್ತು ೧೪೭

2 ಪಂ.ಭಾ–೪–೩೩

3 ಪಂ.ಭಾ–೨–೨೭

ಈ ಪದ್ಯ ಮೂಲತಃ ಆದಿಪುರಾಣದ್ದು.[1] ಇದನ್ನು ನೋಡಿದಾಕ್ಷಣ ಯಮನಿಂದ ತನ್ನನ್ನು ಬಿಡಿಸಿಕೊಂಡು ಬದುಕಿಸುವಂತೆ ತನ್ನ ಸತಿ ಸ್ವಯಂಪ್ರಭೆಯಲ್ಲಿ ಅಂಗ ಲಾಚುತ್ತಿದ್ದ ಲಲಿತಾಂಗನದೇವನಿಗೆ ದೇವತೆಗಳು ಮಾಡಿದ ಬುದ್ಧಿವಾದದ ಪ್ರಸಂಗದ ಆದಿಪುರಾಣದ ಪದ್ಯವೇ ನೆನಪಿಗೆ ಬರುತ್ತದೆ.

"ನಿನಗೊರ್ವಂಗಲ್ಲವಸ್ಥಾಂತರಮುಮರಜನಕ್ಕೆಲ್ಲಮೀ ಪಾಂಗೆ ಕಾರು
ಣ್ಯ ನಿನಾದಂ ನಿನ್ನನಾದಂ ನಗಿಸುಮೆಟಿದುಯ್ಯಂತಕಂಗಿಲ್ಲಿ ದೇವಾಂ
ಗನೆಯರ್ ಮಾಜಿಸಾಂಪರೆ ಪೇಳ್ ಜನನಮೃತಿ ಜರಾತಂಕ ಶೋಕಾಗ್ನಿಯಿಂದಾ
ವನುಮೀ ಸಂಸಾರದೊಳ್ ಬೇಯದನೊಳನೆ ಶರಣ್‌ಧರ್ಮದಿಂದೊಂದುಮುಂಟೇ॥[2]

ಮೇಲಿನ ಎರಡು ಪದ್ಯಗಳಂತೆಯೇ ಇರುವ ಪಂಪಭಾರತದ

"ಜ್ಞಾನಮಯನಾಗಿ ಸಂಸಾರಾನಿತ್ಯತೆಯಂ ಜಲಕ್ಕನಾಗಱಿದಿರ್ದ
ಜ್ಞಾನಿಯವೋಲ್ ನೀನುಂ ಶೋಕಾನಲ ಸಂತಪ್ತ ಚಿತ್ತನಪ್ಪುದು ದೊರೆಯೇ ॥[3]

ಎಂಬ ಪದ್ಯವೂ ವಿಶಿಷ್ಟವಾದುದು. ತನ್ನವರಿಗಾದ ಸಾವು–ನೋವುಗಳ ಬಗ್ಗೆ ದುಃಖಿಸುತ್ತಿದ್ದ ಧರ್ಮರಾಜನಿಗೆ ವ್ಯಾಸರು ಬುದ್ಧಿ ಹೇಳುವ ಪ್ರಸಂಗದ ಪದ್ಯವಿದು. ಪಂಪ ಭಾರತದಿಂದ ಹೊರತೆಗೆದು ನೋಡಿದರೆ ಖಚಿತವಾಗಿ ಇದೊಂದು ಜೈನ ಪುರಾಣದಲ್ಲಿ ಬಂದಿರುವ ಪದ್ಯವೆಂದು ಅನಿಸದೇ ಇರಲಾರದು. "ಪಲವು ಕಾಲಮರಸುಗೆಯ್ದು ಸಂಸಾರಾಸಾರತೆಗೆ ಪೇಸಿ ತಪೋವನಕ್ಕಭಿಮುಖನಾಗಲ್ಬಗೆದು"[4] ಎಂಬ ಪ್ರತಿಮನ ವೈರಾಗ್ಯದ ಪ್ರಸಂಗದ ಗದ್ಯವು ಪುರಾಣ ಕೃತಿಯೊಂದರಲ್ಲಿ ಬಂದ ಗದ್ಯದ ಹಾಗೆಯೇ ಕಂಡು ಬರುತ್ತದೆ.

ಅರ್ಜುನನ ತಪಸ್ಸಿನ ಪ್ರಸಂಗದಲ್ಲೂ ಕೆಲವು ಜೈನ ನಂಬಿಕೆಗಳು ಒಡಮೂಡುವುದನ್ನು ಕಾಣಬಹುದು. ಅವನ ಉಗ್ರ ತಪದ ಪರಿಣಾಮ ಇಡೀ ತಪೋವನದ ಮೇಲಾದ ರೀತಿಯನ್ನು ಪಂಪ ಈ ಕೆಳಗಿನ ಪದ್ಯದಲ್ಲಿ ತಿಳಿಸಿದ್ದಾನೆ.

"ಕರಿಣಿಯು ಸೀಯಾನಪ್ಪ ಮೊಲೆವಾಲ್ಗೆ ತಗುಳ್ದುದು ತತ್ಕಿಶೋರ ಕೇ
ಸರಿ ಹರಿ ಪೋತಮಂ ಬೆದಱಿತುಂ ಕರಿಪೋತಮವುಂಡುಗರ್ಚಿ ಕೇ
ಸರಿಣಿಯು ಕೆಚ್ಚಲಂ ತುಡುಕುತುಂ ಪರಿದತ್ತು ತುರಂಗ ಯೂಥದೊಳ್
ಬೆರೆಸಿದುವಂದು ಪೆರ್ಬುಲಿಗಳಿಂದ್ರ ತನೂಜ ತಪಃಪ್ರಭಾವದಿಂ[5] ॥೧॥

---

1 ಆ.ಪು.ಆಶ್ವಾಸ–೩–೫೨

2 ಆ.ಪು.–೫–೬

3 ಪಂ.ಭಾ–೧೧–೧೧೮

4 ಪಂ.ಭಾ–೧–೬೫ ಗ

5 ಪಂ. ಭಾ. - ೭–೮೦ + ಆದಿಪುರಾಣ ೭–೪೧

ಅರ್ಜುನನ ತಪಸ್ಸಿನ ಶುಭ ಪರಿಣಾಮದಿಂದಾಗಿ ಸಿಂಹದ ಮರಿಗಳು ಹೆಣ್ಣಾನೆಯ ಹಾಲನ್ನು ಕುಡಿಯಲು ಹಿಂಬಾಲಿಸಿದವು. ಆನೆಯ ಮರಿಗಳು ಸಿಂಹದ ಕೇಸರಗಳನ್ನು ಹಿಡಿದುಕೊಳ್ಳುತ್ತಾ ಓಡಿದವು. ಹೆಬ್ಬುಲಿಗಳು ಜಿಂಕೆಯ ಸಮೂಹದಲ್ಲಿ ಬೆರೆತವು ಎಂಬುದು ಈ ಪದ್ಯದ ಅರ್ಥ. ಕೇವಲಜ್ಞಾನ ಪಡೆದ ತೀರ್ಥಂಕರನು ಸಮವಸರಣ ಮಂಟಪದಲ್ಲಿ ಕುಳಿತು ಧರ್ಮೋಪದೇಶ ಮಾಡುವಾಗ ಇಂಥ ವಿಚಿತ್ರ ದೃಶ್ಯಗಳು ಏರ್ಪಡುತ್ತವೆಯೆಂಬುದನ್ನು ಜೈನ ಪುರಾಣಗಳು ಸಾರುತ್ತವೆ. ಜೀವಿಗಳ ಪರಸ್ಪರ ಸಮರಸದ ಸಂಕಲ್ಪ ಮತ್ತು ಸಂದೇಶಗಳು ಇದರಲ್ಲಿವೆ. ಅರ್ಜುನನ ತಪದಿಂದಾಗಿ ದೇವೇಂದ್ರನಿಗೆ ಆಸನ ಕಂಪನವಾಯಿತೆನ್ನುವ ಪಂಪನ ಮಾತು[1] ಜೈನ ಸರಣಿಯ ನಂಬಿಕೆಯೇ ಆಗಿದೆ.

ಮುಂದೆ ಪಾಶುಪತಾಸ್ತ್ರವನ್ನು ಪಡೆದ ಅರ್ಜುನನನ್ನು ಇಂದ್ರ ಸತ್ಕರಿಸುವ ಸನ್ನಿವೇಶಕ್ಕೂ, ಕೇವಲಜ್ಞಾನ ಪಡೆದ ತೀರ್ಥಂಕರನನ್ನು ಇಂದ್ರ ಸತ್ಕರಿಸುವ ಸನ್ನಿವೇಶಕ್ಕೂ ಮತ್ತೆ ಸಾಮ್ಯ ಕಂಡು ಬರುತ್ತದೆ. ಪುರಾಣಗಳಲ್ಲಿ ಸ್ವತಃ ಇಂದ್ರ ತೀರ್ಥಂಕರನಿದ್ದಲ್ಲಿಗೇ ಬಂದು ಗೌರವಾದರಗಳನ್ನು ತೋರಿಸಿದರೆ ಇಲ್ಲಿ ಇಂದ್ರ ಅರ್ಜುನನನ್ನು ಅಮರಾವತಿಗೆ ಕರೆದೊಯ್ದು ಉಪಚರಿಸುತ್ತಾನೆ. "ದೇವೇಂದ್ರ ತನ್ನೊಡನೆ ಮಜ್ಜನಂಬುಗಿಸಿ ದಿವ್ಯಾಹಾರಂಗಳನೊಡನಾರೋಗಿಸಿ...ತನ್ನ ತುಡುವ ತುಡುಗೆಗಳೆಲ್ಲಮಂ ತುಡಿಸಿ"[2] ಹೀಗೆ ಸ್ವತಃ ಇಂದ್ರನು ಅರ್ಜುನನ್ನು ಗೌರವಿಸಿದ ರೀತಿಯಿದು. ಅಂತೂ ಪಂಪನು ಈ ಕಲ್ಪನೆಯನ್ನು ತನ್ನ ಭಾರತದಲ್ಲಿ ಬಳಸಿಕೊಂಡಿರುವುದು ಜೈನ ಮೂಲದ ಪ್ರಭಾವದಿಂದ ಎಂಬುದು ಸ್ಪಷ್ಟ.

ಮುಂದೆ ಬರುವ ಅರ್ಜುನನ ಪಟ್ಟಾಭಿಷೇಕದ ಪ್ರಸಂಗವೂ ಮತ್ತೊಮ್ಮೆ ಸಮವಸರಣ ಮಂಟಪದ ಪ್ರಸಂಗವನ್ನು ನೆನಪಿಸಿ ಕೊಡುತ್ತದೆ. ನಾಳೆ ನಡೆಯಲಿರುವ ಅರ್ಜುನನ ಪಟ್ಟಾಭಿಷೇಕಕ್ಕಾಗಿಯೇ ಮಯನಿಂದ ವಿಶೇಷವಾಗಿ ರಚಿಸಲಾದ ಸಭಾಮಂಟಪವನ್ನು ಧರ್ಮರಾಜ ಮತ್ತು ಕೃಷ್ಣ ಕೂಡಿ ಆ ಪಟ್ಟ ಬಂಧೋತ್ಸವವನ್ನು ಏರ್ಪಡಿಸಿದರಂತೆ. ಧರ್ಮೋಪದೇಶಕ್ಕಾಗಿಯೇ ವಿಶೇಷವಾಗಿ ರಚಿತವಾದ ಅಲೌಕಿಕ ಸಭಾಮಂಟಪವನ್ನು ಇಂದ್ರ ತೀರ್ಥಂಕರನಿಗೆ ಕಾಣಿಕೆಯಾಗಿ ಕೊಟ್ಟು ಅದರಲ್ಲಿ ತೀರ್ಥಂಕರನ ಧರ್ಮೋಪದೇಶ ನಡೆಯುವಂತೆ ನೋಡಿಕೊಳ್ಳುತ್ತಾನೆಂಬುದಾಗಿ ಜೈನ ಪುರಾಣಗಳಲ್ಲಿ ಬರುವ ವರ್ಣನೆಯ ಪ್ರತಿರೂಪ ಇದಾಗಿದೆ.

ಅರ್ಜುನನ ತಪೋಭಂಗದಲ್ಲಿ ನಿರತರಾಗಿರುವ ಅಪ್ಸರೆಯರಾಡುವ

---

1 ಪಂ. ಭಾ. ೭–೮೦ ಗ

2 ಪಂ. ಭಾ. ೭–೨೯ ಗ

ಕಡು ತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ ಪೋ
ಸುಡಿಯುವೊ ಮೂರ್ಖ ಸಗ್ಗದ ಫಲಂ ಸುಖಮಲ್ತೆ ಸುಖಕ್ಕೆ ಪೇೞೊಡಂ
ಬಡದವರಾರೊ ಪೆಂಡಿರೊಳಗಾರ್ ಪೆಱರಾಮೆ ದಲಾಮೆ ಬಂದು ಕಾ
ಲ್ಪಿಡಿದಪೆವಿಂಬುಕೆಯ್ದೊಡಿವು ಮೆಲ್ಲಡಿಗಳ್ಗಡ ಕರ್ಚುಂ ಬೂದಿಯುಂ ॥[1]

ಎಂಬ ಮಾತು ಆದಿಪುರಾಣದ ಮಹಾಬಲನ ಓಲಗದಲ್ಲಿ ಜರುಗಿದ ಧರ್ಮಗೋಷ್ಠಿಯಲ್ಲಿ ಜೈನ ಧರ್ಮವನ್ನು ಕುರಿತು ಮಹಾಮತಿ-ಸಂಭಿನ್ನಮತಿಗಳಾಡಿದ

ತಲೆವರಿದುಟ್ಟುದಿಕ್ಕಿ ಸುರಲೋಕ ಸುಖಂಗಳನುಣ್ಬೆವೆಂಬ ಬ
ತ್ತಲೆಗರ ಮಾತುಗೊಳ್ಳದಿರು ಬಾೞ್ಪಿನವಿಂದ್ರಿಯ ವರ್ಗದಿಚ್ಛೆಯಂ
ಸಲಿಸಿ ಬಸಂತದೊಳ್ ಕಳಿಕೆಗಚ್ಚಿದ ಕೋಗಿಲೆಯಂತೆ ಬಿಚ್ಚತಂ
ನಲಿವುದು ಕಂಡರಾರ್ ಮಱುಭವಂಗಳನಿಲ್ಲಿ ವಿಯಚ್ಚರೇಶ್ವರಾ ॥[2]

ಎಂಬ ಮಾತನ್ನೇ ಹೋಲುತ್ತದೆ. ಇಂದ್ರಿಯ ಸುಖ ಸ್ವರ್ಗ ಸುಖಕ್ಕಿಂತ ಮೇಲೆಂಬುದು ಈ ಎರಡೂ ಪದ್ಯಗಳ ಭಾವ. ಭಾರತದ ಪದ್ಯ ಒಬ್ಬ ತಪಸ್ವಿಯ ತಪಸ್ಸನ್ನು ವಿಚಲಿತಗೊಳಿಸಲು ಯತ್ನಿಸಿದರೆ, ಆದಿಪುರಾಣದ ಪದ್ಯ ಒಬ್ಬನ ಜೈನ ನಂಬಿಕೆಯನ್ನು ವಿಚಲಿತಗೊಳಿಸಲು ಯತ್ನಿಸಿದೆ. ಅಂತೂ ಈ ಎರಡೂ ಪದ್ಯಗಳ ಭಾವ–ಶೈಲಿ ಒಂದೇ ಆಗಿವೆ.

ಕ್ಷತ್ರಿಯರಿಂದ, ರಾಜರಿಂದ ಪ್ರಜಾರಕ್ಷಣೆಗಾಗಿ ಜರುಗುತ್ತಿದ್ದ ಯುದ್ಧಾದಿ ಪ್ರಸಂಗಗಳಲ್ಲಿ ಜರುಗುವ ಹಿಂಸೆಯನ್ನು ಜೈನಧರ್ಮ ಮಾನ್ಯ ಮಾಡುತ್ತದೆ. ಜೀವನೋಪಾಯದ ವಿಧಾನಗಳಲ್ಲಿ ಜರುಗುವ ಕೆಲವು ಬಗೆಯ ಅನಿವಾರ್ಯ ಹಿಂಸೆಗಳನ್ನು ಆರಂಭಿ ಹಿಂಸೆ, ಉದ್ಯೋಗಿ ಹಿಂಸೆ ಮೊದಲಾಗಿ ಗುರುತಿಸಿ ಜೈನಧರ್ಮ ಅಂಥ ಹಿಂಸೆಗಳನ್ನು ಮನ್ನಿಸುತ್ತದೆ. ಭೀಷ್ಮರನ್ನು ಶರಶಯ್ಯೆಯ ಮೇಲೆ ಮಲಗಿಸಿದ ತಮ್ಮ ತಪ್ಪಿನ ಅರಿವಾಗಿ ಧರ್ಮರಾಯ ಭೀಷ್ಮರಲ್ಲಿಗೆ ಹೋಗಿ ತಮ್ಮಿಂದಾದ ಹಿಂಸೆಯನ್ನು ಮನ್ನಿಸಲು ಕೇಳಿದಾಗ "ಕ್ಷತ್ರಿಯ ಧರ್ಮಮೆ ಇಂತು ನೀಮದರ್ಕೆ ಅಳಲ್ವೇಡಿ ಬೀಡಿಂಗೆ ಪೋಗಿಂ"[3] ಎಂದು ಭೀಷ್ಮರಾಡಿದ ಮಾತಿನಲ್ಲಿ ಪಂಪ ಬಹುಶಃ ಈ ವಿಚಾರವನ್ನೇ ಸಮರ್ಥಿಸಿದಂತಿದೆ.

ಅದರಂತೆ ಪಂಪಭಾರತದಲ್ಲಿ ಬರುವ ದೇವತೋಪದ್ರವವು[4] ಜೈನರ ಉಪಸರ್ಗ-ಪರೀಷಹಗಳನ್ನು ನೆನಪಿಸುತ್ತದೆ.

---

1 ಪಂ. ಬಾ. ೭–೫೩ ಗ.
2 ಲೆ. ಪು. ೭–೯
3 ಪಂ. ಭಾ. ೧೧–೪೮ ಗ
4 ಪಂ. ಭಾ. ೮–೪೧

ಚಕ್ಷುಷ್ಮನೆಂಬ ಮನುವಿನ ವಿಚಾರ[1] ಕೇವಲಭೋದವೆಂಬ ಕಲ್ಪನೆಗಳೂ ಜೈನ[2] ಪುರಾಣಗಳ ಕಲ್ಪನೆಗಳಾಗಿವೆ. ಕೃಷ್ಣನನ್ನು ಅಜಿತನೆಂದು ಕರದದ್ದು[3] ಇಂಥದೇ ಇನ್ನೊಂದು ವಿಷೇಶ. 'ಪಾರದರದೊಳ್ ಸತ್ತಂಗಟಲ್ವನ್ನರಾರ್'[4] ಮತ್ತು 'ಶುಚಿಯಿಲ್ಲದನ ಗಂಡುಂ ತೊಂಡಂ'[5] ಎಂಬ ಎರಡು ಮೂರು ಪ್ರಸಂಗಗಳಲ್ಲಿ ಪ್ರತಿಪಾದಿತವಾದ ಬ್ರಹ್ಮಚರ್ಯದ ಹೆಗ್ಗಳಿಕೆ ಜೈನ ಪಂಚ ಅಣುವ್ರತಗಳಲ್ಲಿರುವ ಬ್ರಹ್ಮಚರ್ಯದ ಸ್ಥಾನಮಾನವನ್ನೇ ತಿಳಿಸಿದಂತಿದೆ. ಅಗ್ನಿಕುಂಡದಲ್ಲಿ ಹುಟ್ಟಿದ ದ್ರೌಪದಿಯು 'ಜ್ವಾಲಾಮಾಲಿನಿಯಂತೆ ಕಂಡಳೆಂಬ[6] ಪಂಪನ ಮನಸ್ಸಿನಲ್ಲಿ ಜೈನ ಯಕ್ಷ ಜ್ವಾಲಾಮಾಲಿನಿಯ ಕಲ್ಪನೆ ಇದ್ದಂತಿದೆ. ಐದಾರು ಪ್ರಸಂಗಗಳಲ್ಲಿ ಒಡಮೂಡಿದ ಸರಿಸ್ಪತಿಯ[7] ನೆನಪು, ಸಾಮಾನ್ಯವಾಗಿ ಎಲ್ಲ ಕರ್ಮಗಳಿಂದಲೂ ಮಾನ್ಯತೆ ಪಡೆದಿರುವ ದಾನ-ತ್ಯಾಗ-ಕ್ಷಮೆ ಮೊದಲಾದ ಮೌಲ್ಯಗಳ ಮೇಲಿನ ವಿಶೇಷ ಒತ್ತು ಹೀಗೆ ಹಲವು ಹತ್ತು ಕಡೆಗಳಲ್ಲಿ ಜೈನ ಛಾಯೆ ಮಿಂಚಿರುವುದನ್ನು ಕಾಣಬಹುದು.

ಇಷ್ಟೆಲ್ಲ ಜೈನ ಪ್ರಕ್ರಿಯಗಳು ಭಾರತದಲ್ಲಿ ಬಂದಿವೆಯೇನೋ ನಿಜ. ಆದರೆ ಇವೆಲ್ಲ ಪಂಪ ತನ್ನ ಲೌಕಿಕ ಕೃತಿಯೊಂದರಲ್ಲಿ ತರಲೇ ಬೇಕಾಗಿದ್ದ ಉದ್ದೇಶಿತ ಅಥವಾ ಅನಿವಾರ್ಯ ಅಂಶಗಳೇನಲ್ಲ. ಇವು ಕೇವಲ ಪ್ರಾಸಂಗಿಕ ಸೇರ್ಪಡೆಗಳು ಮಾತ್ರ. ಪಂಪ ಇಲ್ಲಿ ಈ ಅಂಶಗಳನ್ನು ಸೇರಿಸಿರುವುದರಿಂದ ಜೈನ ಧರ್ಮಕ್ಕೆ ಯಾವ ಪ್ರಯೋಜನವೂ ಇಲ್ಲ. ಹೆಚ್ಚೆಂದರೆ ತನ್ನ ಕಥಾನಾಯಕ ಅರ್ಜುನನ ವ್ಯಕ್ತಿತ್ವಕ್ಕೆ ಅಗಾಧ್ಯತೆ, ಅಲೌಕಿಕತೆಗಳು ಪ್ರಾಪ್ತವಾಗಲಿ ಎಂಬ ಒಂದು ಉದ್ದೇಶ ಪಂಪನ ಮುಂದೆ ಇದ್ದಿರಬೇಕು. ಇಲ್ಲಿ ನಿರೂಪಿಸಲಾದ ಕೆಲವು ಅತಿ ಮುಖ್ಯ ಅಂಶಗಳು ಪಂಪನಿಗೆ ತಿಳಿಯಲಾರದೆ ಭಾರತದಲ್ಲಿ ಸೇರಿಸಿಕೊಂಡಿರುವುದೂ ಸಾಧ್ಯವಿದೆ.

ಒಟ್ಟಾರೆ ಕವಿ ಪಂಪಭಾರತ ರಚನೆಗಾಗಿ ವೈದಿಕ ಭಾರತ ಕಥೆಯನ್ನು ಎತ್ತಿಕೊಂಡಿದ್ದು ಬುದ್ಧಿಪೂರ್ವಕವಾಗಿ ಎಂಬುದು ನಿಸ್ಸಂದೇಹ. ಅಂತೆಯೇ ಈ ಕೃತಿಯಲ್ಲಿ ವೈದಿಕ ಸರಣಿಯ ಪ್ರಕ್ರಿಯೆಗಳಿಗೇ ಅಗ್ರಮಾನ್ಯ ಸ್ಥಾನ ದೊರಕಿರುವುದು ಸ್ವಾಭಾವಿಕವಾಗಿದೆ.

---

1 ಪಂ. ಭಾ. ೧೨-೪೮ ಗ 2 ಪಂ. ಭಾ. ೧೨-೯೭
3 ಪಂ. ಭಾ. ೧೧-೧೫೦ 4 ಪಂ. ಭಾ. ೮-೮೧
5 ಪಂ. ಭಾ. ೮-೮೨, ೧-೪೭ 6 ಪಂ. ಭಾ. ೩-೯೨ ಗೆ
7 ಪಂ. ಭಾ. ೧-೫, ೨-೯, ೨-೩೯ ಗ ೭-೮೮.

# ಮಹಿಳೆಯರ ಮೇಲಿನ ಅತ್ಯಾಚಾರ

—ಅಂದನೂರು ಶೋಭಾ

ಅತ್ಯಾಚಾರ...ಸ್ತ್ರೀಯೊಬ್ಬಳ ಮೇಲೆ ಸಾಮೂಹಿಕ ಅತ್ಯಾಚಾರ...ಚಿಕ್ಕ ಬಾಲಕಿಯ ಮೇಲೆ ಅತ್ಯಾಚಾರ...ಮಹಿಳೆಯ ಮೇಲೆ ಮೆರವಣಿಗೆ...ಕೋಮು ಗಲಭೆಯ ದ್ವೇಷದ ದಳ್ಳುರಿಯ ನಾಲಗೆ ಹೀರಿದ್ದು ಮಹಿಳೆಯರನ್ನು...ಹೀಗೆ ನಮ್ಮ ದೇಶದಲ್ಲಿ ಮಹಿಳೆಯರ ಮೇಲೆ ಪ್ರತಿ ದಿನ, ಪ್ರತಿ ನಿಮಿಷ ಅತ್ಯಾಚಾರ, ಹಿಂಸೆ ವರ ದಕ್ಷಿಣೆಯ ಸಾವು, ಅಪಹರಣ ನಡೆಯುತ್ತಲೇ ಇವೆ. ಈ ಕುರಿತು ಗಂಭೀರವಾಗಿ ಯಾರಾದರೂ ಯೋಚಿಸುತ್ತಿದ್ದಾರೆಯೇ ? ನಡೆಯುವ ಪ್ರಕರಣಗಳಲ್ಲಿ ಒಂದೆರೆಡು ಮಾತ್ರ ಪತ್ರಿಕೆಗಳಲ್ಲಿ ವರದಿಯಾಗುವುದು. ಆದರೆ ಅದೆಷ್ಟೋ ಪ್ರಕರಣಗಳು ವರದಿ ಯಾಗದೆ ಸದ್ದು ಗದ್ದಲವಿಲ್ಲದೆ ನಡೆದು...ಎಸಗಿದವರು ಯಾವ ಶಿಕ್ಷೆಯೂ ಇಲ್ಲದೆ, ತಾನು ಏನೂ ಮಾಡಿಲ್ಲವೆಂಬಂತೆ ರಾಜಾರೋಷವಾಗಿ ಸುತ್ತಾಡಿಕೊಂಡಿರುತ್ತಾರೆ. ದಾಖಲೆಯಾದ ಪ್ರಕರಣಗಳಲ್ಲಿ ನೊಂದ ಹೃದಯಕ್ಕೆ ನ್ಯಾಯ ದೊರಕುವುದೂ ಇಲ್ಲ... ಕಾರಣ ಶೀಲಗೆಟ್ಟ ಮಹಿಳೆಯೆಂಬ ಹಣೆಪಟ್ಟಿ ಕಟ್ಟಿ ಕಾನೂನು ಕೈ ತೊಳೆದುಕೊಂಡ ಪ್ರಕರಣಗಳು ನಮ್ಮ ಮುಂದೆ ಸಾಕಷ್ಟು ಇವೆ. ಅತ್ಯಾಚಾರಕ್ಕೆ ಒಳಗಾದ ಹೆಣ್ಣು ಮಕ್ಕಳ ರೋದನ ಅರಣ್ಯ ರೋದನವಾಗಿದೆ.

ನಮ್ಮ ದೇಶದಲ್ಲಿ ಮಹಿಳೆಯರನ್ನು ಗೌರವದಿಂದ, ಪೂಜಾ ಮನೋಭಾವದಿಂದ ನೋಡುತ್ತಿರುವುದರೊಂದಿಗೆ, ಅವರಿಗೆ ಸಾಮಾಜಿಕವಾಗಿ ಲಭಿಸಬೇಕಾಗಿದ್ದ ಹಕ್ಕು ಬದ್ಧವಾದ ಅಧಿಕಾರವನ್ನು ನೀಡದೆ ಸ್ವಂತ ಪ್ರಯೋಜನಕ್ಕಾಗಿ ಬಳಸಿಕೊಳ್ಳುತ್ತಿರು ವವರು ಇದ್ದಾರೆ. ಕಾಲು ಒರೆಸುವ ಬಟ್ಟೆಗಿಂತ ಕೀಳಾಗಿ ಕಾಣುತ್ತಿದ್ದಾರೆ. ಆಕೆಯೂ 'ವ್ಯಕ್ತಿ', ನನ್ನಂತೆ 'ಉಸಿರಾಡುತ್ತಾಳೆ', ಆಕೆಗೂ 'ಮನಸೆಂಬುದು' ಇದೆ. 'ವಸ್ತು' ವಲ್ಲ ಅನ್ನುವ ಅಂಶ ಅನೇಕರಿಗೆ ತಿಳಿದೇ ಇಲ್ಲ. ಇನ್ನು ಹಲವರಿಗೆ ಭೋಗದ ವಸ್ತು. ತಮ್ಮ ಆಸೆಗೆ ಹಾಸಿಗೆಯಾದವಳು ; ಕುಡಿತದ ಅಮಲಿಗೆ ರಂಗಾಕಬೇಕಾದವಳು. ಅಷ್ಟೇ ಅಲ್ಲ ತಮ್ಮ ಕಾಮ ತೃಷೆಯನ್ನು ತೃಪ್ತಿಪಡಿಸಲೆಂದೇ ಸ್ತ್ರೀಯರು ಹಾಗೂ ಹುಡುಗಿಯರು ಇರುವರೇಂಬುದು ಕೆಲವರ ಭಾವನೆ. ವಯಸ್ಸಾದ ಪುರುಷರು ತಮ್ಮ ಕಾಮ ತೃಷೆಗಾಗಿ ಹದಿ ಹರೆಯದ ಕಿಶೋರಿಯರ ಬೆನ್ನ ಹತ್ತುತ್ತಿರುವುದು ; ತಮ್ಮ ತಾಳಕ್ಕೆ ಧ್ವನಿಗೂಡಿಸದಿದ್ದರೆ ಕುಲಟೆ. ಇಂತಹ ಸಮಾಜದಲ್ಲಿ ಅತ್ಯಾಚಾರಕ್ಕೆ ಒಳಗಾದ ಮಹಿಳೆಗೆ ನ್ಯಾಯ ಬಿಸಿಲು ಕುದುರೆ ಏರಿದಂತೆ. ಕಾನೂನಿನಲ್ಲಿ ಸಾಕಷ್ಟು ನ್ಯೂನತೆ

ಗಳಿರುವುದರಿಂದಲೇ ಅತ್ಯಾಚಾರಿಗಳಿಗೆ ಶಿಕ್ಷೆ ಇಲ್ಲ. ಈ ಅತ್ಯಾಚಾರ ಮಹಿಳೆಯ ಘನತೆ-ಗೌರವಕ್ಕೆ ಮಸಿ ಬಳಿಯುವುದಲ್ಲದೆ, ಆಕೆಯ ಭವಿಷ್ಯವನ್ನು ಹೊಸೆದು ಹಾಕುತ್ತಿದೆ.

ಗ್ರಾಮೀಣ ಪರಿಸರದಲ್ಲಿ ಹೊಲ ಗದ್ದೆಗಳ ನಡುವೆ ನಡೆಯುವ ಪ್ರಕರಣಗಳು, ಹಿಂದುಳಿದ, ಬುಡಕಟ್ಟು ಜನಾಂಗದವರ ಮೇಲೆ ನಡೆಯುತ್ತಿರುವ ಅತ್ಯಾಚಾರಗಳು, ನಗರಗಳಲ್ಲಿ ಕಚೇರಿಗಳಲ್ಲಿ, ವಿದ್ಯಾ ಸಂಸ್ಥೆಗಳಲ್ಲಿ, ಸಂಶೋಧನಾ ರಂಗಗಳಲ್ಲಿ, ಆಸ್ಪತ್ರೆಗಳಲ್ಲಿ, ಅನಾಥಾಲಯ, ರಿಮ್ಯಾಂಡ್ ಹೋಮ್‌ಗಳಲ್ಲಿ, ಕಾರಾಗೃಹ, ಪಾಲಕತ್ವದಲ್ಲಿ, ಪೋಲೀಸ್ ಠಾಣೆಗಳಲ್ಲಿ...ಮುಂತಾದ ಕಡೆಗಳಲ್ಲಿ ನಡೆಯುತ್ತಿರುವ ಪ್ರಕರಣಗಳಲ್ಲಿ ಬೆಳಕಿಗೆ ಬರುತ್ತಿರುವುವು ಕೇವಲ ಕೆಲವೇ ಕೆಲವು. ಹೀಗೆ ಬೆಳಕಿಗೆ ಬಾರದಿರಲು ಹಲವಾರು ಕಾರಣಗಳುಂಟು.

ಗ್ರಾಮೀಣ ಪ್ರದೇಶಗಳಲ್ಲಿ ಅತ್ಯಾಚಾರಕ್ಕೆ ಒಳಗಾದ ಮಹಿಳೆ ಸಾಮಾಜಿಕ ಕಿರಿಕಿರಿಯಿಂದಾಗಿ ಪೋಲೀಸ್ ಠಾಣೆಗೆ ಹೋಗಿ ಕೂಡಲೇ ದೂರು ನೀಡುವುದಕ್ಕೆ ಆಗದೆ ಇರುವ ಪರಿಸ್ಥಿತಿ ; ತಕ್ಷಣವೇ ವೈದ್ಯಕೀಯ ಪರೀಕ್ಷೆಗೆ ಒಳಗಾಗಿ ಅದರ ವರದಿಯನ್ನು ಪಡೆಯಲು ಅನುಕೂಲಗಳಿಲ್ಲದಿರುವುದು ; ಸಾಕ್ಷ್ಯ ನೀಡಲು ಜನಗಳು ಮುಂದೆ ಬಾರದಿರುವುದು, ಹಲವರಿಗೆ ಜಮೀನುದಾರರ, ಶ್ರೀಮಂತರ ಕೆಂಗಣ್ಣಿನ ಭಯ ; ಹಲವೊಂದು ಮನೆಗಳಲ್ಲಿ 'ಮನೆ ಮರ್ಯಾದೆ'ಯಿಂದಾಗಿ ಪ್ರಕರಣಗಳನ್ನು ಮುಚ್ಚಿ ಹಾಕುವುದು ; ತಮ್ಮ ವಿಷಯ ಇತರರಿಗೆ ತಿಳಿದರೆ ಸಾಮಾಜಿಕ ಬಹಿಷ್ಕಾರ ಅಥವಾ ಮುಂದೆ ತಮ್ಮ ಮನೆಯವರಿಗಾಗುವ ಅವಮಾನಕ್ಕೆ ಹೆದರಿ ತಮ್ಮನ್ನೇ ಇಲ್ಲವಾಗಿಸಿಕೊಳ್ಳುವುದು ; ಇನ್ನು ಕೆಲವೊಂದು ಪ್ರಕರಣಗಳನ್ನು ಪೋಲಿಸಿನವರು ದಾಖಲು ಮಾಡಿಕೊಳ್ಳದಿರುವುದು ; ಇನ್ನು ಅನೇಕರಿಗೆ ಕಾನೂನಿನ ಅರಿವಿಲ್ಲರುವುದು...ಇವುಗಳು ಒಂದು ಬಗೆಯದಾದರೆ, ಮತ್ತೊಂದು ನಾಗರಿಕತೆಯ ಸೆರಗಿನಲ್ಲಿ ನಡೆಯುವ ಅನೇಕ ರೀತಿಯ ಪ್ರಕರಣಗಳು ಸಹ ಮರ್ಯಾದೆ ಹೆಸರಿನಲ್ಲಿ ಬೆಳಕಾಗದಿರುವುದು. ಒಂದೇ ಕಡೆ ನಿವೃತ್ತಿ ಹೊಂದುವವರೆಗೂ ಕೆಲಸ ಮಾಡಬೇಕಾಗಿರುವ ಪರಿಸ್ಥಿತಿಯಿಂದಾಗಿಯೇ ; ತಮ್ಮ ಸಂಶೋಧನೆಗೆ ಪ್ರತಿಫಲ ಸಿಗದಿರುವಂತಹ ವಾತಾವರಣವುಂಟಾಗಲು ಮನಸೊಪ್ಪದಿರುವುದು ; ಪಾಲಕತ್ವದಲ್ಲಿ ನಡೆಯುತ್ತಿರುವುದರ ಮಾಹಿತಿಯೇ ದೊರಕುತ್ತಿಲ್ಲದಿರುವುದು ; ವಿದ್ಯಾರ್ಥಿನಿಯರಿಗೆ ತಮ್ಮ ಸಹ ವಿದ್ಯಾರ್ಥಿಗಳಿಂದ ಹಾಗೂ ಉಪಾಧ್ಯಾಯರಿಂದ ಗುರಿಪಡಿಸಲಾಗುವ ಅಸಹನೀಯ ವಾತಾವರಣಗಳಿಂದ ಬಿಡುಗಡೆ ಸಾಧ್ಯವಿಲ್ಲದಿರುವುದು... ಹೀಗೆ ಮೌನವಾಗಿಯೇ ಎಲ್ಲ ರೀತಿಯ ಶೀಲಹರಣಕ್ಕೆ ಒಳಗಾಗಿ ಬಹಿರಂಗಗೊಳಿಸದ ಅನೇಕ ಮಹಿಳೆಯರಿದ್ದಾರೆ. ತಮಗಾದ ಅನ್ಯಾಯದ, ಶೋಷಣೆಯ ವಿರುದ್ಧ ಪ್ರತಿಭಟಿಸದೆ, ಹೋರಾಡದಷ್ಟು ಅಸಹಾಯಕರಾಗಿದ್ದಾರೆ. ಇನ್ನು ಕೆಲವರು ಮಾನಸಿಕ ಆಘಾತಕ್ಕೆ ಒಳಗಾಗಿದ್ದಾರೆ. ಆದರೆ ಮಹಿಳೆಯರು ತಮಗಾಗಿರುವ ಅನ್ಯಾಯದ ವಿರುದ್ಧ ಪ್ರತಿಭಟಿಸಲೇಬೇಕು. ಅನೇಕರ ದಾಹಕ್ಕೆ ಆಹಾರವಾಗದೆ ತಪ್ಪಿತಸ್ಥರು ಮತ್ತೊಮ್ಮೆ

ಇಂತಹ ಹೀನ ಕೃತ್ಯವೆಸಗದಂತೆ ಶಿಕ್ಷೆಗೆ ಒಳಪಡಿಸಬೇಕು. ಹಾಗೂ ಅಂತವರ ಹೆಸರನ್ನು ಸಾರ್ವಜನಿಕರ ಗಮನಕ್ಕೆ ತರುವಂತೆ ಬಹಿರಂಗಗೊಳಿಸಬೇಕು. ಅದಕ್ಕಾಗಿಯೇ ಅತ್ಯಾಚಾರಕ್ಕೆ ಒಳಗಾದ ಮಹಿಳೆಯರು ಅತ್ಯಾಚಾರಿಗಳಿಗೆ ಶಿಕ್ಷೆ ವಿಧಿಸುವಂತೆ ಕಾನೂನು ನೆರವು ಪಡೆಯುವುದು ತೀರ ಅಗತ್ಯವಾಗಿದೆ. ಮಹಿಳೆಯರ ದೂರು ವಿಭಾಗ, ವಿಶೇಷ ನ್ಯಾಯಾಲಯ, ಕುಟುಂಬ ನ್ಯಾಯಾಲಯಗಳನ್ನು ಸರ್ಕಾರ ತೆರೆದಿರುವುದರ ಉದ್ದೇಶ ಮಹಿಳೆಯರಿಗಾಗಿರುವ ಅನ್ಯಾಯಕ್ಕೆ ಕೂಡಲೇ ನ್ಯಾಯ ದೊರಕಿಸಿ ಕೊಡುವುದೇ ಆಗಿದೆ.

**ಅತ್ಯಾಚಾರ ಎಂದರೇನು ?**

ಅತ್ಯಾಚಾರವೆಂಬುದು ಮಹಿಳೆಯ ಮೇಲೆ ನಡೆಯುವ ಬಲಾತ್ಕಾರವಾದ ಹಿಂಸೆ. ಇದು ವಿಷಯ ಲಂಪಟತನದಿಂದ ಹೇಯವಾಗಿ ಮಹಿಳೆಯ ಮೇಲೆ ದೈಹಿಕವಾಗಿ ಆಕ್ರಮಣ ನಡೆಸುವ ಕ್ರೌರ್ಯಗಳು ಅನಿರೀಕ್ಷಿತವಲ್ಲ. ಬೇಕೆಂತಲೆ ನಡೆಸುವ ಆಕ್ರಮಣ. ಪುರುಷರು ತಾವು ಬಲಶಾಲಿಗಳೆಂದು ಸ್ತ್ರೀಯರ ಮೇಲೆ ಈ ರೀತಿಯ ಬಲಪ್ರಯೋಗ ನಡೆಸುತ್ತಾರೆ. ಇದರಿಂದಾಗಿ ಅನೇಕ ಸ್ತ್ರೀಯರು ಮಾನಸಿಕ ಆಘಾತದಿಂದ ಜೀವನ ಪರ್ಯಂತ ಒಂದು ರೀತಿಯ ಭಯದ ಜೀವನ ನಡೆಸುತ್ತಾರೆ ; ಜೀವಂತ ಶವವಾಗುತ್ತಾರೆ. ಒಂದು ವರದಿಯ ಪ್ರಕಾರ ನಮ್ಮ ದೇಶದಲ್ಲಿ ಪ್ರತಿ ಎರಡು ಗಂಟೆಗೊಂದರಂತೆ ಅತ್ಯಾಚಾರ ಸಂಭವಿಸುತ್ತಿದೆಯೆಂದು ವರದಿಯಾಗಿದೆ. ಕಳೆದ ವರ್ಷಗಳಲ್ಲಿ ಸುಮಾರು 4000 ಕ್ಕೂ ಹೆಚ್ಚು ಅತ್ಯಾಚಾರದ ಪ್ರಕರಣಗಳು ನಡೆದಿವೆ.

ಭಾರತದಲ್ಲಂತೂ ಇತರ ದೇಶಗಳಿಗಿಂತ ಭಿನ್ನವಾಗಿ ಅತ್ಯಾಚಾರ ಕೆಲವೊಂದು ಜಾತಿ–ವರ್ಗಗಳ ಮೇಲೆ ಹೆಚ್ಚಾಗಿ ನಡೆಯುತ್ತಿವೆ. ಯು.ಎಸ್. ವರದಿಯ ಪ್ರಕಾರ ಜಗತ್ತಿನಲ್ಲೇ ಪಾಲಕತ್ವದಲ್ಲಿನ ಅತ್ಯಾಚಾರ (Custodian Rape) ಹೆಚ್ಚಾಗಿ ಭಾರತದಲ್ಲಿಯೇ ಸಂಭವಿಸುತ್ತಿರುವುದು. ಆದರೆ ಇವುಗಳ ಬಗೆಗೆ ಮಾಹಿತಿ ದೊರಕುತ್ತಿಲ್ಲ. ಕಾರಣ ಒಂದು ರೀತಿಯ ಭಯ ಅಥವಾ ಮಾನಸಿಕ ಹಿಂಸೆಯಿಂದಾಗಿ ಈ ಬಗೆಗೆ ದೂರು ನೀಡದೆ ಇರುವುದು. ಜೊತೆಗೆ ಸ್ವತಂತ್ರವಾಗಿ ಬದುಕಲು ಧೈರ್ಯವಿಲ್ಲದಿರುವುದು.

**ಸಮೂಹ ಮಾಧ್ಯಮಗಳ ಪಾತ್ರ**

ಸಮೂಹ ಮಾಧ್ಯಮಗಳು, ಅದರಲ್ಲಿಯೂ ಪತ್ರಿಕೆಗಳು ಅತ್ಯಾಚಾರದ ವರದಿ ಬಂದಾಗ ನಮ್ಮ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರಿಗೆ ಮಾನವ ಹಕ್ಕುಗಳ ದೃಷ್ಟಿಯಿಂದಲಾದರೂ ನ್ಯಾಯ ದೊರಕಿಸಿಕೊಡುವ ಮಹತ್ತರ ಕಾರ್ಯವನ್ನು ನಡೆಸಿ ಕೊಡಬಹುದು. ತಮ್ಮದೇ ಆದ ವರದಿಗಾರರ ನೆರವಿನಿಂದ ತಪ್ಪಿತಸ್ಥರ ಬಗ್ಗೆ

ಹೆಚ್ಚಿನ ಮಾಹಿತಿ ಪಡೆದು ಪ್ರಕಟಿಸುವುದರ ಮೂಲಕ ಸಾರ್ವಜನಿಕರ ಗಮನ ಸೆಳೆದಂತಾಗುವುದು. ಜನ ಜಾಗೃತಿ ಮೂಡಿಸಿ ಎಲ್ಲರ ನೆರವಿನಿಂದಲೇ ಇಂತಹ ಹೀನ ಕೃತ್ಯಗಳು ಮರುಕಳಿಸದಂತೆ ನೋಡಿಕೊಳ್ಳಬಹುದಾಗಿದೆ. ಕಾರಣ 1980ರ ಲೈಂಗಿಕ ಅತ್ಯಾಚಾರದ ವಿಧೇಯಕದಲ್ಲಿ ಅತ್ಯಾಚಾರಕ್ಕೆ ಸಂಬಂಧಿಸಿದ ವರದಿಗಳನ್ನು ಪತ್ರಿಕೆಯಲ್ಲಿ ಪ್ರಕಟಿಸುವುದು ನ್ಯಾಯಬಾಹಿರವಾಗಿದೆ. ಹಾಗೆ ನ್ಯಾಯಾಲಯದಲ್ಲಿ ನಡೆಯುವ ವಿಚಾರಣೆಯು ಗುಪ್ತವಾಗಿ ನಡೆಯುವುದು ಕಡ್ಡಾಯವಾಗಿರುವುದರಿಂದ, ಅತ್ಯಾಚಾರಿಯನ್ನು ಬಯಲಿಗೆಳೆಯುವುದನ್ನು ವಿಧೇಯಕ ತಡೆಯೊಡ್ಡಿದೆ. ಆದರೆ ಇಂತವರನ್ನು ಬೆಳಕಿಗೆ ತರುವ ಮಹತ್ತರ ಕಾರ್ಯವನ್ನು ಪತ್ರಿಕೆಗಳು, ವಿಚಾರವಂತರು ಹಾಗೂ ಮಹಿಳಾ ಸಂಘಟನಕಾರರು ಮಾಡುವುದು ತೀರ ಆಗತ್ಯ.

ಇತ್ತೀಚೆಗೆ ಬೆರಳೆಣಿಕೆಯಷ್ಟು ಪ್ರಕರಣಗಳು ಪತ್ರಿಕೆಯಲ್ಲಿ ವರದಿಯಾದುದರಿಂದಲೇ ಸಾರ್ವಜನಿಕರ ಗಮನಕ್ಕೆ ಬಂದದ್ದನ್ನು ಮರೆಯಬಾರದು. ಇದೀಗ ರಾಯಚೂರುಜಿಲ್ಲೆಯ ಕುಷ್ಟಗಿಯಲ್ಲಿ ಗರ್ಭಿಣಿ ಶರಣ್ಣಮ್ಮನ ಮೇಲೆ ಸರ್ಕಾರಿ ಅಧಿಕಾರಿಗಳು ನಡೆಸಿದ ಸಾಮೂಹಿಕ ಅತ್ಯಾಚಾರ ಅದರಿಂದ ಆ ಮಹಿಳೆಯ ಸಾವು ಕುರಿತು ಪತ್ರಿಕೆಯ ವರದಿಯನಂತರವೇ ಈ ವಿಷಯ ಕುರಿತು ವಿಧಾನ ಮಂಡಲದಲ್ಲಿ ಚರ್ಚೆ ನಡೆದದ್ದು. ಅಂದರೆ ಪೋಲೀಸ್ ವಿಭಾಗ, ಗುಪ್ತದಳ ಹೇಗೆ ಕಾರ್ಯನಿರ್ವಹಿಸುತ್ತವೆಂಬುದಕ್ಕೆ ಇದೂ ಒಂದು ಸಾಕ್ಷಿ. ಶರಣವ್ವ ಗರ್ಭಿಣಿ ಎಂಬುದು ತಿಳಿದೂ ತಮ್ಮ ವಿಷಯ ಲಂಪಟತನದಿಂದ ಸಮಾಜದಲ್ಲಿ ಉನ್ನತ ಸ್ಥಾನದಲ್ಲಿದ್ದು ಅಧಿಕಾರಿಗಳು ನಡೆಸಿಕೊಂಡ ರೀತಿ ನೋಡಿದರೆ, ಇಂತವರು ಯಾವ ರೀತಿ ತಮ್ಮ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರಬಹುದು. ಹಾಗೆಯೇ ಎಷ್ಟು ಜನ ಹೆಣ್ಣುಮಕ್ಕಳಿಗೆ ಕಂಟಕರಾಗಿದ್ದಿರಬಹುದು. ಶರಣವ್ವ ಸತ್ತದ್ದರಿಂದ ಈ ವಿಷಯ ಬೆಳಕಿಗೆ ಬಂದಿದೆಯೇ ಹೊರತು, ನಮ್ಮ ಸಮಾಜದಲ್ಲಿ ಪ್ರತಿ ದಿನವೂ, ಪ್ರತಿ ನಿಮಿಷವೂ ನಡೆಯುತ್ತಿರುವ ಅತ್ಯಾಚಾರಗಳಿಗೆ ಕೊನೆ ಎಂದು ? ಇಂತಹ ಕಾಮುಕರಿಗೆ ಜೀವಾವಧಿ ಶಿಕ್ಷೆಯನ್ನು ಇಲ್ಲವೇ ಗಲ್ಲಿಗೇರಿಸಬೇಕು. ಅಂದರೆ ಅತ್ಯಾಚಾರಕ್ಕೆ ಒಳಪಟ್ಟ ಹೆಣ್ಣು ಮಕ್ಕಳು ಪಡುವ ಯಾತನೆ–ನೋವಿನ ಅನುಭವ ಇವರಿಗೂ ಆಗಬೇಕು.

ಅಷ್ಟೇ ಅಲ್ಲ ಡಿಸೆಂಬರ್ 6, 1992 ರಂದು ಭಾರತದಲ್ಲಿ ಸಂಭವಿಸಿದ ಘೋರ ಘಟನೆಯ ಪ್ರತಿಫಲ ಅನೈಕ ಮಹಿಳೆಯರು ಉಂಡಿದ್ದಾರೆ.

ಉದಾಹರಣೆಗೆ : ಡಿಸೆಂಬರ್ 10ರಂದು ಬುಸಾವಾಲ್ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದ 19 ವರ್ಷದ ಯುವತಿಯನ್ನು ರೈಲಿನಿಂದ ಹೊರಗೆಳೆದು ಆಕೆಯ ಅಣ್ಣನ ಎದುರಿಗೆ ಸಾಮೂಹಿಕ ಅತ್ಯಾಚಾರ ನಡೆಸಿದ್ದು ನಂತರ ಆಕೆಯ ಮುಂದೆ ಅವಳಣ್ಣನಿಗೆ ಚೂರಿ ಹಾಕಿ ಸಾಯಿಸಿದ ಪ್ರಕರಣ. ಮದುವೆಯಾಗಿ 15 ದಿನಗಳ ನಂತರ

ರಂಗುರಂಗಿನ ಕನಸುಹೊತ್ತು, ತನ್ನ ಜೀವನ ಸಂಗಾತಿಯನ್ನು ಸೇರಲು ಬಂದ ಪತ್ನಿಯನ್ನು ಪತಿಯ ಎದುರೇ ನಡೆಸಿದ ಅತ್ಯಾಚಾರ, ಸೂರತಿನಪೊಲೀಸ್ ಅಧಿಕಾರಿಯ ತಂಗಿಯ ಮೇಲೆ ಡಿಸೆಂಬರ್ 7 ರಂದು ವರಾಚಾ ರಸ್ತೆಯಲ್ಲಿ ನಡೆದ ಅತ್ಯಾಚಾರ ಪ್ರಕರಣ, ಬೀದರ್‌ನಲ್ಲಿ ಸಂಭವಿಸಿದ ಪ್ರಕರಣಗಳು ಹೀಗೆ ನೂರಾರು ಅತ್ಯಾಚಾರ ಪ್ರಕರಣಗಳು ದೇಶಾದ್ಯಂತ ನಡೆದಿದೆ. ಯಾವುದೇ ಗಲಭೆ ಯಲ್ಲಿ ಆಸ್ತಿ ನಷ್ಟವಾದರೆ ತುಂಬಬಹುದು. ಸತ್ತವರ ಹಿತೈಷಿಗಳಿಗೆ ಸರ್ಕಾರ ಉದಾರವಾಗಿ ಲಕ್ಷ ರೂಪಾಯಿ ಪರಿಹಾರ ನೀಡಬಹುದು, ಆದರೆ ಯಾವುದೂ ತಪ್ಪಿಲ್ಲದ ಮಹಿಳೆಯರ ಎಲ್ಲವನ್ನು ಕಿತ್ತುಕೊಳ್ಳುವ ಮೃಗಗಳಿಗಿಂತಲೂ ಹೀನವಾಗಿ ನಡೆದುಕೊಳ್ಳುವ ಅತ್ಯಾಚಾರಿಗಳಿಗೆ ಶಿಕ್ಷೆ ಇಲ್ಲವೇ ಹಾಗೂ ಅಂತಹ ಮಹಿಳೆಯರಿಗೆ ಸರ್ಕಾರ ಪರಿಹಾರ ಏನನ್ನು ನೀಡಲು ಸಾಧ್ಯ ?

**ತಂದೆ-ತಾಯಿಯರ ಗುರುತರ ಹೊಣೆ**

ಇತ್ತೀಚೆಗೆ ಹೆಚ್ಚಾಗಿ ಬಾಲಕಿಯರ ಮೇಲೆ - ಸಣ್ಣ ಮಕ್ಕಳ ಮೇಲೆ ಯಾರಿಗೂ ತಿಳಿಯದಂತೆ ನಡೆಯುತ್ತಿರುವ ಅತ್ಯಾಚಾರಗಳ ವರದಿಯಾಗುತ್ತಲೇ ಇಲ್ಲ. ಕಾರಣ ಅತ್ಯಾಚಾರ ಎಸಗುವವರು ಬೇರೆ ಯಾರೂ ಆಗದೆ, ಅವರ ಹತ್ತಿರದ ಸಂಬಂಧಿಕರು, ಮನೆಗೆ ಬರುತ್ತಿರುವ ಆಪ್ತರು, ಹಾಗೂ ಅಕ್ಕ ಪಕ್ಕದವರು ಆಗಿರುವರು.

ಬಾಲಕಿಯರ ಮೇಲೆ ಅತ್ಯಾಚಾರ ಎಸಗುತ್ತಿರುವವರ ವಯೋಮಿತಿ 18-25 ನಡುವಣ ಹರೆಯದವರೇ ಹೆಚ್ಚಾಗಿದ್ದಾರೆ. ಅತ್ಯಾಚಾರ, ಅಪರಾಧವೆಸಗಲು ಬಡತನ, ನಿರುದ್ಯೋಗ ತಕ್ಕ ಪ್ರೇರಣೆ ನೀಡಿರಬಹುದು. ಆದರೆ ಬಾಲಕಿಯರ ಮೇಲೆ ದಿನದಿಂದ ದಿನಕ್ಕೆ ಹೆಚ್ಚುಗುತ್ತಿರುವುದಕ್ಕೆ ಕಾರಣ ಅಶ್ಲೀಲ ಅಂಶ ಹೆಚ್ಚಾಗಿರುವ ಸಿನಿಮಾಗಳು, ಭಿತ್ತಿ ಪತ್ರಗಳು, ಪತ್ರಿಕೆಗಳು, ಕ್ಯಾಸೆಟ್ಟುಗಳು ಸಹ ಆಗಿವೆ.

ಶಿಶು ಅತ್ಯಾಚಾರದ ಪ್ರಕರಣಗಳು ಗಣನೀಯವಾಗಿ ಏರುತ್ತಿರುವುದು ಕೇವಲ ಕೊಳೆಗೇರಿ ಪ್ರದೇಶಗಳಲ್ಲಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ಪ್ರದೇಶಗಳಲ್ಲಿ ಮಾತ್ರವಲ್ಲದೆ, ಸಮಾಜದ ಎಲ್ಲ ವರ್ಗಗಳಲ್ಲಿಯೂ ನಡೆಯುತ್ತಿವೆ. ಸಾಕಷ್ಟು ಅತ್ಯಾಚಾರಗಳು ಕುಟುಂಬದ ಒಳಗಡೆಯಲ್ಲಿಯೇ ನಡೆಯುತ್ತಿವೆ. ತೀರ ವಿಚಿತ್ರವೆಂದರೆ ತಾಯಂದಿರು ಹೆರಿಗೆಗಾಗಿ ಆಸ್ಪತ್ರೆಯಲ್ಲಿದ್ದಾಗ, ತಂದೆಯಿಂದಲೇ ಮಗಳ ಮೇಲೆ ಅತ್ಯಾಚಾರ ಎಸಗಿದ, ಸಹೋದರರಿಂದಲೇ ಸಂಭವಿಸಿದ ಪ್ರಕರಣಗಳು ಇವೆ. ಇಂತಹ ಪ್ರಕರಣಗಳ ಬಗೆಗೆ ತಾಯಂದಿರು ಹೆಚ್ಚಾಗಿ ಪೋಲೀಸರಿಗೆ ವರದಿ ಮಾಡಲು ಇಚ್ಛಿಸುವುದಿಲ್ಲ. ಶಿಶು ಅತ್ಯಾಚಾರ ಪ್ರಕರಣಗಳ ಬಗ್ಗೆ ಬೇಗನೇ ನ್ಯಾಯಾಲಯಗಳಲ್ಲಿ ಇತ್ಯರ್ಥವಾಗುವುದಿಲ್ಲ. ಜೊತೆಗೆ ಹೆಚ್ಚಿನ ಅಪರಾಧಿಗಳಿಗೆ ಶಿಕ್ಷೆಯು ಆಗುವುದಿಲ್ಲ. ಉದಾಹರಣೆಗೆ: ಒರಿಸ್ಸಾದ ಮಯೂರ್ ಭಂಜ್ ಹಳ್ಳಿಯ

ಜಹರ್‌ಲಾಲ್ ದಾಸ್ ಎಂಬುವನು 1988ರಲ್ಲಿ 5 ವರ್ಷದ ಮುಗ್ಧ ಬಾಲೆಯೊಬ್ಬಳ ಮೇಲೆ ಅತ್ಯಾಚಾರ ನಡೆಸಿದ್ದಲ್ಲದೆ ಆಕೆಯನ್ನು ಕೊಲೆ ಮಾಡಿದ ಅಪರಾಧಕ್ಕಾಗಿ ಕೆಳಗಿನ ಕೋರ್ಟು ಆತನಿಗೆ ಮರಣದಂಡನೆ ವಿಧಿಸಿತ್ತು. ಆದರೆ, ಆತ 1991ರಲ್ಲಿ ಏಪ್ರಿಲ್ 15ರಂದು ಸುಪ್ರೀಂಕೋರ್ಟಿಗೆ ಅಪೀಲು ಮಾಡಿಕೊಂಡ. ಸುಪ್ರೀಂಕೋರ್ಟಿನ ಮೂವರು ನ್ಯಾಯಾಧೀಶರು ಜಹರ್‌ಲಾಲ್‌ನ ಅಪರಾಧವನ್ನು ಸಾಬೀತು ಪಡಿಸಲು ಸಾಕಷ್ಟು ಸಾಕ್ಷಾಧಾರಗಳಿಲ್ಲವೆಂದು ಅವನನ್ನೂ ನಿರಪರಾಧಿ ಎಂದು ತೀರ್ಮಾನವಿತ್ತಿತ್ತು. ಶಿಶು ಅತ್ಯಾಚಾರಗಳ ಸಾಕ್ಷಾಧಾರಗಳಿಲ್ಲವೆಂಬುದೂ, ಮಹಿಳೆಯರ ಮೇಲಿನ ಅತ್ಯಾಚಾರಗಳು ಮಹಿಳೆಯರು ಶೀಲಗೆಟ್ಟವರೆಂಬ ಹಣೆಪಟ್ಟಿ ಕಟ್ಟಿ ನ್ಯಾಯಾಲಯ ಅಪರಾಧಿಗಳಿಗೆ ಶಿಕ್ಷೆಯಿಲ್ಲದಂತೆ ತೀರ್ಮಾನ ಕೊಡುತ್ತಿರುವುದನ್ನು ನೋಡಿದರೆ, ಕಾನೂನಿನ ವ್ಯವಸ್ಥೆಯು ಬಗೆಗೆ ಅಸಹ್ಯ ಬರುತ್ತದೆ. ಇದಕ್ಕೆ ಇರಬಹುದು ನ್ಯಾಯ ದೇವತೆಯು ಕಣ್ಣಿಗೆ ಬಟ್ಟೆ ಕಟ್ಟಿರುವುದು.

ಇನ್ನು ತಂದೆ-ತಾಯಂದಿರು ವಯಸ್ಸಿನ ಅಂತರವೆಂದು ಭಾವಿಸದೆ ಮುಂಜಾಗ್ರತಾ ಕ್ರಮದಿಂದ ಮಕ್ಕಳೊಂದಿಗೆ ಇಂತಾ ವಿಷಯಗಳನ್ನು ಕುರಿತು ಚರ್ಚಿಸಬೇಕು. ಹಾಗೆಯೇ ಹದಿಹರೆಯದ ಹೆಣ್ಣುಮಕ್ಕಳು ಇಂತಹ ಪರಿಸ್ಥಿತಿ ಎದುರಾದಾಗ ಯಾವ ರೀತಿ ನಡೆದುಕೊಳ್ಳಬೇಕೆಂದು ತಿಳಿಸಬೇಕು. ಅಷ್ಟೇ ಅಲ್ಲದೆ ಹೆಣ್ಣುಮಕ್ಕಳಿಗೆ ಕಡ್ಡಾಯವಾಗಿ ಕರಾಟೆಯನ್ನು ಕಲಿಸಬೇಕು. ಹಾಗೆಯೇ ಸರ್ಕಾರ ವಿಳಂಬ ಮಾಡದೆ ಲೈಂಗಿಕ ಶಿಕ್ಷಣವನ್ನು ಪ್ರೌಢಶಾಲೆಯ ಹಂತದಿಂದಲೇ ಪಠ್ಯಕ್ರಮದಲ್ಲಿ ಸೇರಿಸಿ ಕಲಿಸುವಂತಾಗಬೇಕು. ಗಂಡು ಹೆಣ್ಣುಮಕ್ಕಳು ಒಟ್ಟಾಗಿಯೇ ಕಲಿಯುವಂತಾಗಬೇಕು. ಲೈಂಗಿಕತೆಯನ್ನು ಕೆರಳಿಸುವಂತಹ ಸಿನಿಮಾ ಹಾಗೂ ಪುಸ್ತಕಗಳನ್ನು ಪ್ರಕಟಿಸಿ ಕಡಿಮೆ ಬೆಲೆಗೆ ಮಾರಿ ಸಮಾಜದಲ್ಲಿ ದುಷ್ಪರಿಣಾಮ ಬೀರುತ್ತಿರುವ ಶಕ್ತಿಗಳ ವಿರುದ್ಧ ಕಠಿಣ ಕ್ರಮ ಕೈಗೊಳ್ಳಬೇಕು.

**ಲೈಂಗಿಕ ಅತ್ಯಾಚಾರ ವಿಧೇಯಕ**

ಅನೇಕ ವರ್ಷಗಳಿಂದಲೂ ಅಂದರೆ 1860ರಲ್ಲಿ ರಚಿತವಾಗಿದ್ದ ಲೈಂಗಿಕ ಅತ್ಯಾಚಾರದ ಕಾನೂನಿನಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಆದರೆ ಮಥುರಾಳ ಮೇಲೆ ಇಬ್ಬರು ಪೋಲೀಸಿನವರು ಎಸಗಿದ ಅತ್ಯಾಚಾರ, ನಂತರ ಸುಪ್ರೀಂ ಕೋರ್ಟಿನ ತೀರ್ಪು. ಈ ತೀರ್ಪಿನ ವಿರುದ್ಧ ಮಹಿಳೆಯರು ಪ್ರತಿಭಟಿಸಿದ್ದರಿಂದ ಹಾಗೂ ಈ ಪ್ರಕರಣ ಪಡೆದ ಪ್ರಚಾರದಿಂದಾಗಿ ದೇಶಾದ್ಯಂತ ನಡೆದ ಚರ್ಚೆ, ವಿಚಾರವಂತರೆಲ್ಲರ ಬೆಂಬಲ, ಇತ್ಯಾದಿಯಿಂದಾಗಿ ಈ ವಿಧೇಯಕದಲ್ಲಿ ಇದೀಗ ಸ್ವಲ್ಪ ತಿದ್ದುಪಡಿಯನ್ನು ತರಲಾಗಿದೆ. ಭಾರತ ದಂಡ ಸಂಹಿತೆ ಭಾಗ 375ರಲ್ಲಿ ಸ್ತ್ರೀಯ ಇಚ್ಛೆಗೆ ವಿರುದ್ಧ ಪುರುಷ ಸಂಭೋಗ ನಡೆಸಿದರೆ ; ಅಥವಾ ಆಕೆಯ ಒಪ್ಪಿಗೆಯಿಲ್ಲದೆ ನಡೆಸಿದರೆ

ಅಥವಾ ಆಕೆಗೆ ಸಂಬಂಧಿಸಿದವರನ್ನು ಕೊಲ್ಲುತ್ತೇವೆಂದು ಅಥವಾ ತೊಂದರೆ ಪಡಿಸುತ್ತೇವೆಂದೊ ಹೆದರಿಸಿ, ಭಯ, ಭೀತಿ ಹುಟ್ಟಿಸಿ ಆಕೆಯ ಒಪ್ಪಿಗೆ ಪಡೆದು ನಡೆದಾಗ; ಮಾದಕ ವಸ್ತು ತಿನಿಸಿ ಅಥವಾ ಕುಡಿಸಿ ಆಕೆಯ ಮೇಲೆ ನಡೆಸಿದಾಗ ಅಥವಾ ಮತಿ ಭ್ರಮಣೆಯಾದ ಹೆಂಗಸಿನ ಮೇಲೆ ನಡೆಸಿದಾಗ ಅಥವಾ 16 ವರ್ಷಕ್ಕಿಂತ ಕಡಿಮೆ ವಯೋಮಿತಿಯ ಯುವತಿ ಒಪ್ಪಿಗೆ ನೀಡಲಿ, ನೀಡದಿರಲಿ. ಅಂತವರ ಮೇಲೆ ಅತ್ಯಾಚಾರ ನಡೆದಿದ್ದರೆ ಇಂತಹ ಪ್ರಕರಣಗಳನ್ನು ಅತ್ಯಾಚಾರವೆಂದೇ ಪರಿಗಣಿಸುತ್ತಾರೆ.

ಸಂಭೋಗ ನಡೆಸುವ ಮುನ್ನ ಹೆಣ್ಣಿನ ಅನುಮತಿ ಪಡೆದಿರಬೇಕೇ ಹೊರತು ನಂತರ ಅಲ್ಲ. ಹಾಗೆಯೇ ತನ್ನ ಹೆಂಡತಿಯಲ್ಲದೆ ಬೇರೆ ಸ್ತ್ರೀ ನಿದ್ರೆಯಲ್ಲಿರುವಾಗ ನಡೆಸಿದರೆ ಅತ್ಯಾಚಾರವಾಗುತ್ತದೆ. ಅಷ್ಟೇ ಅಲ್ಲದೆ 15 ವರ್ಷಕ್ಕಿಂತ ಕಡಿಮೆ ವಯಸಿನ ಹೆಂಡತಿಯೊಂದಿಗಿನ ಸಂಭೋಗವು ಸಹ ಅತ್ಯಾಚಾರವಾಗುತ್ತದೆ. ಹಾಗೆಯೇ ಪತಿಯಾದವನು ತನ್ನ ಹೆಂಡತಿಯನ್ನು ಬೇರೆಯವರೊಂದಿಗೆ ಸಂಭೋಗ ನಡೆಸಲು ಬಲಾತ್ಕರಿಸಿದರೆ ಅಂತವರಿಗೆ ಶಿಕ್ಷೆ ಇದೆ. ಹಾಗೆಯೇ ಪೋಲೀಸ್ ಅಧಿಕಾರಿ ತನ್ನ ಅಭಿರಕ್ಷೆಯಲ್ಲಿರುವ ಸ್ತ್ರೀಯ ಮೇಲೆ ಅತ್ಯಾಚಾರವೆಸಗುವುದು [10 ವರ್ಷ ಸಜೆ, ಅಥವಾ ಜೀವಾದಧಿ ಶಿಕ್ಷೆ]. ಸರ್ಕಾರಿ ಅಧಿಕಾರಿ ತನ್ನ ಹುದ್ದೆಯ ಘನತೆಯನ್ನು ದುರುಪಯೋಗ ಪಡಿಸಿಕೊಂಡು ತನ್ನ ಕೆಳಗೆ ಕೆಲಸ ಮಾಡುವ ಸ್ತ್ರೀಯ ಮೇಲೆ ಅತ್ಯಾಚಾರವೆಸಗುವುದು, ಕಾರಾಗೃಹ ಅಥವಾ ಅನಾಥಾಲಯ ಅಥವಾ ಬಂಧನದಲ್ಲಿಟ್ಟಿರುವ ಸ್ತ್ರೀಯರ ಮೇಲೆ ತನ್ನ ಪದೀಯ ಸಾಮರ್ಥ್ಯವನ್ನು ದುರುಪಯೋಗ ಪಡಿಸಿಕೊಂಡು ಅತ್ಯಾಚಾರ ಎಸಗಿದರೆ [5 ವರ್ಷಗಳ ಸಜೆ ದಂಡದೊಂದಿಗೆ], ಸ್ತ್ರೀಯು ಗರ್ಭಿಣಿಯೆಂದು ತಿಳಿದು ಸಹ ಅವಳ ಮೇಲೆ ಅತ್ಯಾಚಾರ ಎಸಗುವುದು, 12 ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲಕಿಯರ ಮೇಲೆ ಅತ್ಯಾಚಾರವೆಸಗುವುದು [ಅಂತವರಿಗೆ 7 ವರ್ಷಗಳ ಸಜೆ], ಪತಿಯಿಂದ ದೂರವಿರುವ ಅಂದರೆ ಕೋರ್ಟಿನ ನಿರ್ದೇಶನದಿಂದಲೊ ಇಲ್ಲವೇ ಸಂಪ್ರದಾಯದಿಂದಾಗಿ ಹೆಂಡತಿಯೊಂದಿಗೆ ಬಲವಂತವಾಗಿ ಸಂಭೋಗ ನಡೆಸಿದರೆ (ಅಂತವರಿಗೆ 2 ವರ್ಷಗಳು ಸಜೆ ಹಾಗೂ ದಂಡ]; ಸಾಮೂಹಿಕವಾಗಿ ಅತ್ಯಾಚಾರವೆಸಗಿದ್ದರೆ ಎಲ್ಲರಿಗೂ ಶಿಕ್ಷೆಯಿದೆ.

### ಕೂಡಲೆ ಕ್ರಮ ಕೈಗೊಳ್ಳುವ ಬಗ್ಗೆ

ಅತ್ಯಾಚಾರಗೊಂಡ ಮಹಿಳೆ ತಾನುತೊಟ್ಟಿದ್ದ ಉಡುಪನ್ನು ಬದಲಾಯಿಸದೆ ಕೂಡಲೆ ವೈದ್ಯಕೀಯ ಪರೀಕ್ಷೆ ಮಾಡಿಸಿಕೊಳ್ಳಬೇಕು, ವೈದ್ಯಕೀಯ ವರದಿಯೊಂದಿಗೆ ಪೋಲಿಸರಲ್ಲಿ ದೂರು ಕೊಡಬೇಕು. ಪೋಲಿಸಿನವರಿಗೆ ಮಹಿಳೆಯು ತೊಟ್ಟಿದ್ದ ಉಡುಪು ರಾಸಾಯನಿಕ ಪರೀಕ್ಷೆಗೆ ಒಳಪಡಿಸಬೇಕಾಗಿದ್ದರೆ, ಮಹಿಳೆ ಆ ಬಟ್ಟೆಗಳನ್ನು ಅವರಿಗೆ ಕೊಡಬೇಕಾದ ಪರಿಸ್ಥಿತಿ ಒದಗಿ ಬರುವುದರಿಂದ ಪೋಲಿಸ್ ಠಾಣೆಗೆ ಹೋಗು

ವಾಗಲೆ ಮತ್ತೊಂದು ಜೊತೆ ಉಡುಪನ್ನು ತಮ್ಮೊಂದಿಗೆ ತೆಗೆದುಕೊಂಡು ಹೋಗು ವುದು ಸೂಕ್ತ. ಹಾಗೆಯೇ ಪೋಲಿಸರು ತಮ್ಮ ದೂರನ್ನು ದಾಖಲು ಮಾಡಿ ಕೊಂಡಿದ್ದನ್ನು ಖಚಿತಪಡಿಸಿಕೊಳ್ಳಬೇಕು. ಒಂದು ಪಕ್ಷ ಪೋಲಿಸರು ದಾಖಲು ಮಾಡಿಕೊಳ್ಳಲು ನಿರಾಕರಿಸಿದರೆ, ಅವರಿಗಿಂತ ಮೇಲಿನ ಅಧಿಕಾರಿಗಳಲ್ಲಿ ದೂರನ್ನು ನೀಡಬೇಕು. ಪೋಲಿಸ್ ಠಾಣೆಗೆ ಹೋಗುವಾಗ ವಕೀಲರನ್ನು ಜೊತೆಗೆ ಕರೆದುಕೊಂಡು ಹೋಗುವುದು ಸೂಕ್ತ. ಹಾಗೆಯೇ ಅತ್ಯಾಚಾರಿಯನ್ನು ಸಹ ಕೂಡಲೇ ವೈದ್ಯಕೀಯ ಪರೀಕ್ಷೆಗೆ ಒಳಪಡಿಸುವಂತೆ ಆಗ್ರಹ ಪಡಿಸಬೇಕು. ಇದರಿಂದ ಸಾಕ್ಷ್ಯಾಧಾರಗಳು ಲಭಿಸುತ್ತವೆ. ಜೊತೆಗೆ ಆತನಿಗೆ ಸಂಬಂಧಿಸಿದ ಉಡುಪು, ಚಪ್ಪಲಿ, ಕನ್ನಡಕ ಇತ್ಯಾದಿ ಯಾವುದೇ ವಸ್ತುವಿದ್ದರು, ಪೊಲೀಸಿನವರ ಅಧೀನದಲ್ಲಿರಿಸಬೇಕು. ಅತ್ಯಾಚಾರ ನಡೆದ ಸ್ಥಳವನ್ನು ಪೋಲಿಸಿನವರು ಬಂದು ಸ್ಥಳ ಪರೀಕ್ಷೆ ಮಾಡಿ ವರದಿ ಸಿದ್ದಪಡಿಸುವ ವರೆಗೂ ಸರಿಪಡಿಸಬಾರದು. ಈ ಎಲ್ಲಾ ಕೆಲಸಕಾರ್ಯಗಳನ್ನು ತಡಮಾಡದೆ ತಕ್ಷಣವೇ ನಿರ್ವಹಿಸಿದರೆ ತಪ್ಪಿತಸ್ಥನ ಬಗ್ಗೆ ಸಾಕ್ಷ್ಯಾದಾರಗಳು ಲಭಿಸಿ, ಕಾನೂನು ಪ್ರಕಾರ ಶಿಕ್ಷೆಗೆ ಒಳಪಡಿಸಲು ನೆರವಾಗುತ್ತವೆ.

ಆದರೆ ಗ್ರಾಮೀಣ ಪ್ರದೇಶದಲ್ಲಿರುವ ಮಹಿಳೆಯರು ಅತ್ಯಾಚಾರಕ್ಕೆ ಒಳ ಪಟ್ಟಾಗ ಕೂಡಲೆ ಪೋಲಿಸಿನವರಲ್ಲಿ ದೂರುಕೊಡಲು ಅಸಾಧ್ಯವಾದ ಪರಿಸ್ಥಿತಿ ಎದುರಾದರೆ, ಅಂತಾ ಸಮಯದಲ್ಲಿ ಆಕೆಯ ಪರವಾಗಿ ಬೇರೆಯವರು ದೂರು ನೀಡ ಬಹುದು. ಅತ್ಯಾಚಾರಕ್ಕೆ ಒಳಗಾದ ಮಹಿಳೆ ಮಾನಸಿಕವಾಗಿ ಸಾಕಷ್ಟು ಹಿಂಸೆಗೆ ಒಳಪಟ್ಟಿರುತ್ತಾಳೆ. ಇಂತಾ ವಿಷಯಗಳಲ್ಲಿ ಮಹಿಳೆಯರು ಕೋರ್ಟಿನಲ್ಲಿ ಸುಳ್ಳನ್ನು ಹೇಳುವುದು ಅಸಾಧ್ಯವಾದ್ದರಿಂದ ಬೇರೆ ಸಾಕ್ಷ್ಯಾಧಾರಗಳ ಅಗತ್ಯವಿಲ್ಲವೆಂದು ಕೋರ್ಟು ಸಹ ತಿಳಿಯಬೇಕಾಗಿದೆ. ಹಾಗೆಯೇ ಅತ್ಯಾಚಾರವೆಸಗಿದವನನ್ನು ದಂಡಾಧಿಕಾರಿಯ ಅಪ್ಪಣೆಯಿಲ್ಲದೆಯೇ ಪೋಲಿಸಿನವರು ದಸ್ತಗಿರಿ ಮಾಡಿ ಕ್ರಮಕೈಗೊಳ್ಳಬಹುದು.

ಇಂತಹ ಮೊಕದ್ದಮೆಗಳನ್ನು ಮಾನವೀಯತೆಯ ದೃಷ್ಟಿಯಿಂದ ಪರಿಶೀಲಿಸಿ ವಿಳಂಬ ಮಾಡದೆ ತಪ್ಪಿತಸ್ಥನಿಗೆ ಉಗ್ರ ಶಿಕ್ಷೆ ಕೊಡಬೇಕು. ವಿಜಿಲನ್ಸ್ ಸಮಿತಿ ಯೊಂದು ಸದಾ ಜಾಗೃತವಾಗಿ ಇಂತಹ ಮೊಕದ್ದಮೆ ನಡೆಯುವಾಗ ಮಹಿಳೆಯರಿಗೆ ಸೂಕ್ತ ರಕ್ಷಣೆಯನ್ನು ಸಹ ಒದಗಿಸುವ ಅಗತ್ಯವಿದೆ. ಕಾರಣ ಅನೇಕ ಮೊಕದ್ದಮೆ ಗಳಲ್ಲಿ ಸಾಕ್ಷಿ ನೀಡುವವರ ಅಪಹರಣ ಅಥವಾ ಅನಿರೀಕ್ಷಿತವಾಗಿ ದುರ್ಮರಣಕ್ಕೆ ಈಡಾಗುವ ಇಲ್ಲವೇ ಬೇರೆ ಆಮಿಷಗಳನ್ನು ಒಡ್ಡಿ ತಮ್ಮ ಪರ ಮಾಡಿಕೊಳ್ಳುವುದು ಹೆಚ್ಚಾಗುತ್ತಿವೆ. ಇಂಥಾ ಮೊಕದ್ದಮೆಗಳ ಬಗ್ಗೆ ಕೂಡಲೇ ನಿರ್ಣಯಿಸಲು ಕುಟುಂಬ ನ್ಯಾಯಾಲಯದ ಪರಿಧಿಗೆ ಒರುವಂತೆ ಅಥವಾ ವಿಶೇಷ ನ್ಯಾಯಾಲಯಗಳನ್ನು ಹೆಚ್ಚಾಗಿ ತೆರೆದು ಅಲ್ಲಿ ನಿರ್ಣಯಿಸಲು ಅನುಕೂಲ ಮಾಡಿಕೊಡಬೇಕು.

ಇದೀಗ ಕೇಂದ್ರ ಸರ್ಕಾರ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಿಂದ ರಕ್ಷಿಸಲು ರಾಷ್ಟ್ರೀಯ ಮಹಿಳಾ ಆಯೋಗವನ್ನು ಅಸ್ತಿತ್ವಕ್ಕೆ ತಂದಿದೆ. ಈ ರೀತಿಯ ಆಯೋಗದಿಂದ ಸ್ವಲ್ಪಮಟ್ಟಿಗಾದರೂ ಮಹಿಳೆಯರಿಗೆ ಅನುಕೂಲವಾಗುವುದೆಂಬ ಭರವಸೆ ಹಾಗೂ ಅಪರಾಧಿಗಳಿಗೆ ಶಿಕ್ಷೆ ವಿಧಿಸುತ್ತಾರೆಂಬ ನಂಬಿಕೆಯೊಂದಿಗೆ, ಮಹಿಳೆಯರ ಬದುಕುವ ಹಕ್ಕನ್ನು ಕಿತ್ತುಕೊಳ್ಳುತ್ತಿರುವ ಕೈ-ಮನಸ್ಸುಗಳ ವಿರುದ್ಧ ಹೋರಾಡಲು ನೆರವು ನೀಡಬೇಕು. ಹಾಗೆಯೇ ಯಾವುದೇ ವಿಷಯದಲ್ಲೇ ಆಗಲಿ ವಿಳಂಬ ಮಾಡದೆ ಕೂಡಲೆ ಕ್ರಮ ಕೈಗೊಳ್ಳಬೇಕು. ನಮ್ಮ ದೇಶದಲ್ಲಿನ ಅನೇಕ ಕಾನೂನುಗಳು ಮಹಿಳೆಯರನ್ನು ಎಷ್ಟರಮಟ್ಟಿಗೆ ರಕ್ಷಿಸುತ್ತಿದೆ ಎಂಬುದನ್ನು ಪುನರ್ ಪರಿಶೀಲಿಸಬೇಕಾಗಿದೆ. ಹಾಗೂ ಅವುಗಳ ಬಗ್ಗೆ ಅನೇಕರಿಗೆ ತಿಳುವಳಿಕೆಯಿಲ್ಲದೆ, ನೆರವಿನ ಹಸ್ತವಿಲ್ಲದೆ ಸಂಕೋಚದಿಂದ ನೋವನುಂಡು ಮರ್ಯಾದೆಯ ಸೆರಗಿನಲ್ಲಿ ಬೇಯುತ್ತಿದ್ದಾರೆ ಇಲ್ಲವೇ ಕೆರೆ-ಬಾವಿಗಳಿಗೆ ಆಹಾರವಾಗುತ್ತಿದ್ದಾರೆ.

ಅತ್ಯಾಚಾರದಂತಹ ಸಾಮಾಜಿಕ ಸಮಸ್ಯೆಯ ವಿರುದ್ಧ ಮಹಿಳೆಯರು, ಸಮಾಜ ಸೇವಾಕರ್ತರು, ಮಾನವ ಹಕ್ಕು ವೇದಿಕೆಯವರು, ಸಾರ್ವಜನಿಕರು ಹೋರಾಡಬೇಕಾಗಿದೆ. ಮಹಿಳೆಯರ ಜಾಗೃತ ಸಮಿತಿ, ಎಚ್ಚರಿಕೆ ಸಮಿತಿ ಇರುವುದು ತೀರ ಅವಶ್ಯಕ. ಹಾಗೆಯೇ ಹಲ್ಲೆಗೆ ಬಲಿಯಾದ ಮಹಿಳೆಯರನ್ನು, ಯಾವ ತಪ್ಪನ್ನು ಮಾಡದ ಮಹಿಳೆಯರನ್ನು, ಮೃಗತೃಷ್ಣರಿಂದ ಹಲ್ಲೆಗೊಳಪಟ್ಟಾಗ ಅಂತವರಿಗೆ ಬದುಕಲು ಅವಕಾಶ ಮಾಡಿಕೊಡಬೇಕೇ ಹೊರತು ದೂಷಿಸಬಾರದು.

ಎಲ್ಲಕ್ಕಿಂತ ಹೆಚ್ಚಾಗಿ ಮಹಿಳೆಯರನ್ನು ಗೌರವಿಸದ ಹೊರತು, ಅವರನ್ನು ಸಮಾನಸ್ಥರೆಂದು, ಭೋಗವಸ್ತುವಲ್ಲ–ವ್ಯಕ್ತಿಯೆಂದು ತಿಳಿಯದ ಹೊರತು ಎಲ್ಲಾ ತಪ್ಪಿಗೂ ಮಹಿಳೆಯೇ ಕಾರಣವೆಂದು ದೂಷಿಸುವುದನ್ನು ಬಿಡದ ಹೊರತು, ಸಾಮಾಜಿಕ ಕ್ರಾಂತಿಯಾಗದ ಹೊರತು ಇಂತಹ ಪ್ರಕರಣಗಳು ಇಲ್ಲದಂತಾಗುವುದು.

# ಮರಾಠಿ ನೃತ್ಯ–ನಾಟಕದಲ್ಲಿ ಜಾಗತಿಕ ಭೂಗೋಳ

ಇಂಗ್ಲಿಷ್ ಮೂಲ : ಡಾ. ರಾಧಾಕೃಷ್ಣಮೂರ್ತಿ
ಕನ್ನಡ ಅನು : ಡಾ. ಎಸ್. ವಿ. ವಿಮಲ

ನೃತ್ಯ–ನಾಟಕವು ಭಾರತದಲ್ಲಿ ಅದರಲ್ಲೂ ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಜನಪ್ರಿಯವಾಗಿದೆ. ನೃತ್ಯ–ನಾಟಕಗಳ ಬೇರೆ ಬೇರೆ ಪ್ರಭೇದಗಳಲ್ಲಿ ಕೊರವಂಜಿ ಬಗೆಯ ಸಂಗೀತದಿಂದ ಕೂಡಿದ ನೃತ್ಯ-ನಾಟಕವು ಬಹಳ ಪ್ರಸಿದ್ಧವಾದುದು. ತಮಿಳು ಸಾಹಿತ್ಯದ–96–ಪ್ರಬಂಧಗಳಲ್ಲಿ ಇದನ್ನು ಒಂದೆಂದು ಪರಿಗಣಿಸಲಾಗಿದೆ. ದಕ್ಷಿಣ ಭಾರತ ಅದರಲ್ಲೂ ತಂಜಾವೂರು ಜಿಲ್ಲೆಯ ಸುತ್ತ ಮುತ್ತಲಿನಲ್ಲಿ ಈ ಕೊರವಂಜಿ ನೃತ್ಯ-ನಾಟಕವನ್ನು ರಾಜರ ಮತ್ತು ಶ್ರೀಮಂತರ ಆಶ್ರಯದಲ್ಲಿ ಅರಮನೆ ಮತ್ತು ದೇವಸ್ಥಾನಗಳಲ್ಲಿ ಕ್ರಮಬದ್ಧವಾಗಿ ಪ್ರದರ್ಶಿಸುತ್ತಿದ್ದರು. ತಂಜಾವೂರಿನ ಮರಾಠರ ಆಡಳಿತದಲ್ಲಿ ಈ ಶ್ರೀಮಂತ ಕಲೆಗೆ ಅತ್ಯಂತ ಹೆಚ್ಚಿನ ಪ್ರೋತ್ಸಾಹ ದೊರಕಿತು. ರಾಜಾಶ್ರಯದಿಂದ ಉತ್ತೇಜಿತರಾಗಿ ಅನೇಕರು ಕೊರವಂಜಿ ನೃತ್ಯ-ನಾಟಕಗಳನ್ನು ರಚಿಸಿದರು ಮತ್ತು ಅವುಗಳ ಪ್ರದರ್ಶನಗಳನ್ನೂ ಏರ್ಪಡಿಸಿದರು. ಕೆಲವು ಮರಾಠಾ ರಾಜರು ಈ ಕಲೆಗೆ ಪ್ರೋತ್ಸಾಹ ನೀಡುವುದರ ಜೊತೆಗೆ ಸ್ವತಃ ತಾವೇ ಇಂತಹ ಕೃತಿಗಳನ್ನು ರಚಿಸುವುದರ ಮೂಲಕ ಸಾಹಿತ್ಯ, ಸಂಗೀತ, ನೃತ್ಯ-ಮೊದಲಾದ ಶ್ರೀಮಂತ ಲಲಿತ ಕಲೆಗಳನ್ನು ಸಮೃದ್ಧಿಗೊಳಿಸಿದರು. ಅಂದರೆ ಕೆಲವು ರಾಜರೂ ಇಂತಹ ಕೃತಿಗಳ ರಚನೆಗೆ ತೊಡಗಿದರು. ಕಲೆಗಳಲ್ಲಿ ಆಸಕ್ತಿ, ಪ್ರೀತಿಯುಳ್ಳ ಇಂತಹ ಮರಾಠಾ ರಾಜರಲ್ಲಿ ಒಬ್ಬನಾದ ಎರಡನೆಯ ಸರಭೋಜಿಯು ತಂಜಾವೂರಿನ ಸಿಂಹಾಸನವನ್ನು ಕ್ರಿ. ಶ. 1798–1833 ರವರೆಗೆ ಅಲಂಕರಿಸಿದ್ದನು.

ಎರಡನೆಯ ಸರಭೋಜಿ ಮಹಾರಾಜನು ದಕ್ಷ ಆಡಳಿತಗಾರ ಮಾತ್ರವಲ್ಲದೆ ಪ್ರಸಿದ್ಧ ವಿದ್ವಾಂಸನೂ ಮತ್ತು ಗ್ರಂಥ ಕರ್ತೃವೂ ಆಗಿದ್ದನು. ಭಾರತೀಯ ಸಾಹಿತ್ಯ ಮತ್ತು ಕಲೆಗಳಿಗೆ ಅವನ ಕಾಣಿಕೆ ಅಮೂಲ್ಯವಾದುದು. ಅವನ ಮಾತೃ ಭಾಷೆ ಮರಾಠಿಯಾಗಿದ್ದರೂ ಅವನು ಹಲವಾರು ಭಾರತೀಯ ಮತ್ತು ವಿದೇಶೀ ಭಾಷೆಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡಿದ್ದನು. ಅವನು ಸಂಸ್ಕೃತ, ತೆಲುಗು, ತಮಿಳು ಮತ್ತು ಮರಾಠಿ ಭಾಷೆಗಳಲ್ಲಿ ರಚಿಸಿದ ಹಲವಾರು ಕೃತಿಗಳಲ್ಲಿ ಅವನ ತೀಕ್ಷ್ಣ ಬುದ್ಧಿಮತ್ತೆ ಹಾಗೂ ಬಹುಮುಖ ಪ್ರತಿಭೆಗಳು ಬೆಳಕಿಗೆ ಬಂದಿವೆ. ಅವನ ಈ ಕೃತಿಗಳು ಭಾರತೀಯ ಕಲೆ, ಸಾಹಿತ್ಯಗಳನ್ನು ಸಂಪನ್ನಗೊಳಿಸಿರುವುದಲ್ಲದೆ, ವಿಶೇಷವಾಗಿ

ಸಂಗೀತ ಮತ್ತು ನೃತ್ಯಕಲೆಗಳಿಗೆ ವಿಶಿಷ್ಟ ಕೊಡುಗೆಗಳಾಗಿವೆ. "ದೇವೇಂದ್ರ ಕೊರವಂಜಿ" ಎಂಬ ನೃತ್ಯ ನಾಟಕವು ಎರಡನೆಯ ಸರಭೋಜಿಯ ಅತ್ಯುತ್ತಮ ಕೃತಿ. ಇದು ಮರಾಠಿ ಭಾಷೆಯಲ್ಲಿ ರಚಿತವಾದ ಅಪೂರ್ವವಾದ ಕೃತಿ. ಏಕೆಂದರೆ, ಇದರ ಕಥಾವಸ್ತು ಜಾಗತಿಕ ಭೂಗೋಳವನ್ನು ಕುರಿತದ್ದಾಗಿದೆ. ಈ ಬಗೆಯ ವಸ್ತುವನ್ನು ಒಳಗೊಂಡಿರುವ ಈ ರೀತಿಯ ಇತರ ಕೃತಿಗಳಿಗಿಂತ ಇದು ವಿಶೇಷ ರೀತಿಯಲ್ಲಿ ಭಿನ್ನವಾಗಿದೆ ಮತ್ತು ಅಷ್ಟೇ ಗಮನಾರ್ಹವಾಗಿದೆ,

ನೃತ್ಯ ಮತ್ತು ನಾಟಕಗಳಂತಹ ಪ್ರದರ್ಶನ ಕಲೆಗಳ ಮಾಧ್ಯಮದ ಮೂಲಕ ಜನಸಾಮಾನ್ಯ ಪ್ರೇಕ್ಷಕನಿಗೂ ಆಧುನಿಕ ವಿಚಾರ, ಸಾಮಾನ್ಯ ಜ್ಞಾನಗಳ ಬಗೆಗೆ ತಿಳಿವಳಿಕೆ ಯನ್ನುಂಟು ಮಾಡಬಹುದೆಂಬುದನ್ನು ರಾಜ ಸರಭೋಜಿಯು ಮನಗಂಡಿರಬೇಕು. ಆದ್ದರಿಂದಲೇ ಅವನು ತನ್ನ ಕೃತಿಯಲ್ಲಿ ಬಳಸಿರುವ ಪದ್ಯ ಮತ್ತು ಗೀತೆಗಳಲ್ಲಿ ಅಲ್ಲಲ್ಲಿ ಬೋಧಪ್ರದವಾದ ವಿಷಯದ ಮೇಲೆ ಬೆಳಕು ಚೆಲ್ಲಿ ವಸ್ತುವಿನಲ್ಲಿ ವೈವಿಧ್ಯವನ್ನು ತಂದಿದ್ದಾನೆ. ಈ ವೈಚಾರಿಕ ವಸ್ತುವನ್ನು ಗಮನದಲ್ಲಿರಿಸಿಕೊಂಡು, ದೇವೇಂದ್ರ ಕೊರವಂಜಿ ಎಂಬ ತನ್ನ ನೃತ್ಯ-ನಾಟಕದಲ್ಲಿ ವಿಶ್ವದ ಅನೇಕ ದೇಶಗಳ ಬಗೆಗಿನ ಭೌಗೋಳಿಕ ವಿವರ ವನ್ನು ಕಥನ ರೂಪದಲ್ಲಿ ಕಥಿಸುವ ಪ್ರಯತ್ನ ಮಾಡಿದ್ದಾನೆ. ಈ ಕೃತಿಯಲ್ಲಿ ಬರುವ ಕೊರವಂಜಿ ಅಥವಾ ಜಿಪ್ಸಿ ಹೆಂಗಸು ವಿಶ್ವದ ಬಹುತೇಕ ಎಲ್ಲಾ ದೇಶಗಳ ಆಗಿನ ಪ್ರಮುಖ ಪಟ್ಟಣಗಳು. ನದಿಗಳು, ಪರ್ವತಗಳು—ಮೊದಲಾದ ಭೌಗೋಳಿಕ ವಿವರ ಗಳನ್ನು ಕಥಿಸುತ್ತಾ ಹೋಗುವುದು ಇಲ್ಲಿಯ ವಿಶೇಷ. ಎರಡನೆಯ ಸರಭೋಜಿಯ ಕಾಲದಲ್ಲಿ ಈ ನೃತ್ಯ-ನಾಟಕವು ಬಹಳ ಜನಪ್ರಿಯವಾಗಿದ್ದರಿಂದ ಇದು ಖಂಡಿತ ವಾಗಿಯೂ ಸಮಾಜದ ಮೇಲೆ ತನ್ನ ವಿಶಿಷ್ಟವಾದ ಪ್ರಭಾವವನ್ನು ಬೀರಿರಬೇಕು. ಅಲ್ಲದೆ ಜನಸಾಮಾನ್ಯ ಪ್ರೇಕ್ಷಕನೂ ಕೂಡ ಜಾಗತಿಕ ಭೂಗೋಳದ ಬಗ್ಗೆ ಸ್ಥೂಲವಾದ ಜ್ಞಾನವನ್ನು ಈ ನೃತ್ಯ ನಾಟಕದಿಂದ ಪಡೆಯಬಹುದಾಗಿತ್ತು.

ತನ್ನ ಪ್ರಿಯಕರನಿಂದ ಅಗಲಿದ ಮತ್ತು ಅವನೊಡನೆ ಪುನರ್ಮಿಲನಕ್ಕಾಗಿ ಹಂಬಲಿಸಿ ಹಾತೊರೆಯುತ್ತಿರುವ ಸುಂದರಳಾದ ನಾಯಕಿಯ ಉದ್ವೇಗ ಮತ್ತು ಮನೋಭಾವಗಳ ಸುತ್ತ ಹೆಣೆದಿರುವ ವಸ್ತುವನ್ನು ನಾವು ಸಾಮಾನ್ಯವಾಗಿ ಕೊರವಂಜಿ ನೃತ್ಯ-ನಾಟಕಗಳಲ್ಲಿ ಕಾಣುತ್ತೇವೆ. ನಂತರ ಕೊರವಂಜಿಯು ನಾಯಕಿಯ ಹತ್ತಿರ ಬಂದು ತಾನು ನೋಡಿದ ಜನರನ್ನು ಮತ್ತು ಊರುಗಳನ್ನು ಹೆಮ್ಮೆಯಿಂದ ವರ್ಣಿಸು ತ್ತಾಳೆ. ಅಷ್ಟೇ ಅಲ್ಲದೆ ತಾನು, ಅವರ ಭವಿಷ್ಯ ವಾಣಿಯನ್ನು ನುಡಿದಿದ್ದಕ್ಕಾಗಿ ಅವರು ಗಳಿಂದ ಪಡೆದ ಅಮೂಲ್ಯವಾದ ಕಾಣಿಕೆಗಳ ಬಗ್ಗೆಯೂ ತಿಳಿಸುತ್ತಾಳೆ. ನಾಯಕಿಯ ಹಸ್ತವನ್ನು ಓದಲು ಒಪ್ಪಿ ನಾಯಕಿ-ನಾಯಕನ ಪುನರ್ಮಿಲನವಾಗುತ್ತದೆಂಬ ಭವಿಷ್ಯ ವಾಣಿಯನ್ನು ನುಡಿಯುತ್ತಾಳೆ. ಇದರಿಂದ ಸಂತೋಷಗೊಂಡ ನಾಯಕಿಯು ಅವಳಿಗೆ

ಅಮೂಲ್ಯವಾದ ಕಾಣಿಕೆಗಳನ್ನು ನೀಡುತ್ತಾಳೆ. ಇನ್ನು ಕೆಲವು ರಚನೆಗಳಲ್ಲಿ ಕೊರವಂಜಿ ಮತ್ತು ಅವಳ ಗಂಡನು ಸಂಧಿಸುವ ಸಂದರ್ಭದ ಹಾಸ್ಯ ಭರಿತವಾದ ದೃಶ್ಯವನ್ನು ಸೇರಿಸಲಾಗಿದೆ.

ದೇವೇಂದ್ರ ಕೊರವಂಜಿ ನೃತ್ಯ-ನಾಟಕವು ಬೇಡರ ವರ್ಗಕ್ಕೆ ಸೇರಿದ ದ್ವಾರಪಾಲಕನ (ಮರಾಠಿಯಲ್ಲಿ ದೌವಾರಿಕಾ ಕೈಕಡ್ ಎನ್ನುತ್ತಾರೆ) ಪ್ರವೇಶದೊಂದಿಗೆ ತೆರೆದುಕೊಳ್ಳುತ್ತದೆ. ದ್ವಾರಪಾಲಕನು ಪ್ರಮುಖ ಪಾತ್ರವಾದ ಕೊರವಂಜಿಯ ಪ್ರವೇಶಕ್ಕೆ ಸಭೆಯನ್ನು ಅಣಿಗೊಳಿಸುತ್ತಾನೆ. ನಂತರ ಉತ್ಸಾಹದ ಚಿಲುಮೆಯಾದ ಉಲ್ಲಾಸದಿಂದ ಕೂಡಿದ ಕಣಿಗಾತಿ ಕೊರವಂಜಿಯು (ಮರಾಠಿಯಲ್ಲಿ ಬುರಡಿನ್ ಎನ್ನುತ್ತಾರೆ) ತನ್ನ ಗೆಳತಿಯಾದ ಕಲ್ಪಲತೆಯೊಡನೆ ಪ್ರವೇಶಿಸುತ್ತಾಳೆ. ಅವಳ ಪರಿಚಯ ಮಾಡಿಕೊಡುವ ಬೇರೆ ಬೇರೆ ಗೀತೆ ಅಥವಾ ದರುಗಳಲ್ಲಿ ಅವಳ ಉಡುಗೆ, ತೊಡುಗೆ, ಭಂಗಿ, ಮಾತು–ಇವುಗಳ ಬಗೆಗೆ ಅತ್ಯಂತ ಸುಂದರವಾದ ವರ್ಣನೆಗಳಿವೆ. ಅನಂತರ ಕೊರವಂಜಿಯು, ಇಂದ್ರನ ನಗರವಾದ ಅಮರಾವತಿಯ ವೈಭವವನ್ನು ಕುರಿತು ಹಾಡುತ್ತಾಳೆ. ಇದನ್ನು ಕೇಳಿದ ಇಂದ್ರಾಣಿಯು ಸಂತೋಷದಿಂದ ಈ ಜಿಪ್ಸಿ ಹೆಣ್ಣಿನ ಬಗ್ಗೆ ಪ್ರಶ್ನಿಸುತ್ತಾಳೆ. ಕೊರವಂಜಿಯು ತಾನು ಮೇರು ಪರ್ವತದ ತುದಿಯಲ್ಲಿ ವಾಸಿಸುತ್ತಿರುವುದಾಗಿ ತಿಳಿಸುತ್ತಾಳೆ. ಅವಳು ಅಲ್ಲಿಂದ ಪ್ರವಾಸ ಹೊರಟು ಭೂಖಂಡದ ಮೇಲಿನ ಅನೇಕ ಭಾಗಗಳನ್ನು ಸಂದರ್ಶಿಸಿರುವುದಾಗಿಯೂ ಮತ್ತು ಆ ಸ್ಥಳಗಳ ಬಗೆಗೆ ತನಗೆ ತಿಳಿವಳಿಕೆ ಇರುವುದಾಗಿಯೂ ತಿಳಿಸುತ್ತಾಳೆ. ಅಲ್ಲದೆ ಸಪ್ತಲೋಕಗಳ ಬಗೆಗೂ ತಾನು ತಿಳಿದುಕೊಂಡಿದ್ದೇನೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಇಡೀ ಬ್ರಹ್ಮಾಂಡದ ಬಗ್ಗೆ ಹೆಚ್ಚಿನ ಜ್ಞಾನವನ್ನು ಸಂಪಾದಿಸಿರುವ ಕೊರವಂಜಿಯ ಶಕ್ತಿ ಸಾಮರ್ಥ್ಯವನ್ನು ತಿಳಿದ ಇಂದ್ರಾಣಿಯು ಸೌರವ್ಯೂಹವನ್ನು ಕುರಿತ ವಿವರವನ್ನು ತಿಳಿಯಲು ಅಪೇಕ್ಷಿಸುತ್ತಾಳೆ. ನಂತರ ಕೊರವಂಜಿಯು ಆನಂದದಾಯಕವಾದ ಗೀತೆಗಳ ಮೂಲಕ ಸೌರವ್ಯೂಹದ ನೈಸರ್ಗಿಕ ಘಟನೆಗಳು, ಭೂಮಿ ಮತ್ತು ಚಂದ್ರನ ಕಾಲಚಕ್ರ ಚಲನೆ, ಈ ಚಲನೆಗಳ ಪರಿಣಾಮ, ಹಾಗೂ ಸೂರ್ಯ ಮತ್ತು ಚಂದ್ರನ ಸುತ್ತಳತೆ–ಇವುಗಳ ವಿವರಣೆಯನ್ನು ನೀಡುತ್ತಾಳೆ. ಅಲ್ಲದೆ ಭೂಮಿ, ಚಂದ್ರ, ಸೂರ್ಯರ–ನಡುವಿನ ಅಂತರ ಹಾಗೂ ಉತ್ತರ ಧ್ರುವ ಮತ್ತು ದಕ್ಷಿಣ ಧ್ರುವಗಳ ಬಗೆಗೂ ತಿಳಿಸುತ್ತಾಳೆ. ಇಂದ್ರಾಣಿಯ ಅಪೇಕ್ಷೆಯ ಮೇರೆಗೆ ಕೊರವಂಜಿಯು ಬೇರೆ ಬೇರೆ ರಾಗ ತಾಳಗಳಲ್ಲಿ ರಚನೆಗೊಂಡ ಸುಮಾರು 90 ಗೀತೆ (ದರು)ಗಳಲ್ಲಿ ಇಡೀ ವಿಶ್ವದ ಭೌಗೋಳಿಕ ವೈಲಕ್ಷಣವನ್ನು ಕುರಿತು ದೀರ್ಘವಾದ ಹಾಗೂ ಸ್ವಾರಸ್ಯಕರವಾದ ಮಾಹಿತಿಯನ್ನು ನೀಡುತ್ತಾಳೆ. ನಾಲ್ಕು ಖಂಡಗಳ ವಿವರಣೆಗನುಸಾರವಾಗಿ ಈ ವರ್ಣನೆಯು ನಾಲ್ಕು ಭಾಗಗಳಾಗಿ ವಿಭಜನೆಗೊಂಡಿದೆ. ಅವೆಂದರೆ ಯೂರೋಪ್, ಏಷ್ಯಾ, ಆಫ್ರಿಕಾ ಮತ್ತು ಅಮೆರಿಕ (ಉತ್ತರ

ಮತ್ತು ದಕ್ಷಿಣ ಅಮೆರಿಕಗಳು). ಈ ಖಂಡಗಳ ಬಹುತೇಕ ಎಲ್ಲಾ ದೇಶಗಳು, ಅವುಗಳ ಪ್ರಾಂತ್ಯಗಳು, ರಾಜಧಾನಿಗಳು, ನಗರಗಳು, ಪಟ್ಟಣಗಳು, ಬಂದರುಗಳು, ನದಿಗಳು, ಪರ್ವತಗಳು, ದ್ವೀಪಗಳು, ಪರ್ಯಾಯ ದ್ವೀಪಗಳು–ಇವುಗಳ ಸುತ್ತಳತೆಯೊಂದಿಗೆ ವರ್ಣಿಸಲ್ಪಟ್ಟಿವೆ. ರಾಜ ಸರಭೋಜಿಯು ಆಸ್ಟ್ರೇಲಿಯಾ ಖಂಡದ ಬಗ್ಗೆ ಏನನ್ನೂ ಹೇಳದಿರುವುದು ಆಶ್ಚರ್ಯಕರವಾಗಿದೆ. ಬಹುಶಃ ಸಮಯಾಭಾವದಿಂದಲೋ ಅಥವಾ ಪ್ರಮಾಣಬದ್ಧವಾದ ಆಸ್ಟ್ರೇಲಿಯಾ ಭೂಪಟವು ಅವನಿಗೆ ದೊರಕದೇ ಇರುವುದ ರಿಂದಲೋ ಈ ಖಂಡದ ವಿವರವನ್ನು ಅವನು ಕೊಟ್ಟಿಲ್ಲವೆಂದು ಕಾಣುತ್ತದೆ. ಕೊರವಂಜಿಯನ್ನು ಪ್ರಶ್ನೆ ಮಾಡಿದ ಇಂದ್ರಾಣಿಯು ಅವಳ ಅಗಾಧವಾದ ಭೌಗೋಳಿಕ ಜ್ಞಾನಕ್ಕೆ ಬೆರಗಾಗುತ್ತಾಳೆ. ಕಡೆಯಲ್ಲಿ ಈ ಜಿಪ್ಸಿ ಹೆಣ್ಣು ತಾನೇ ಶಕ್ತಿಯೆಂದೂ, ಆದ್ಯ ಪರಮಾತ್ಮನ ಪತ್ನಿಯೆಂದೂ, ಇಡೀ ಬ್ರಹ್ಮಾಂಡವನ್ನು ಸೃಷ್ಟಿಸಿದ ಮಹಾ ಮಾಯೆ ತಾನೆಂದು ತಿಳಿಸುತ್ತಾಳೆ. ಜಿಪ್ಸಿ ಹೆಣ್ಣು ಮತ್ತು ಅವಳ ಗಂಡನು ಭೇಟಿ ಯಾಗುವ ಸಂದರ್ಭವು ಈ ಕೃತಿಯ ಕೊನೆಯ ಭಾಗದಲ್ಲಿ ಬರುತ್ತದೆ. ಬುರಡಿನ್ ಮತ್ತು ಬುರಡ ಅವರ ಸಮಾಗಮವು (ಜಿಪ್ಸಿ ಹೆಣ್ಣು ಅವಳ ಗಂಡ) ರಸಮಯವಾಗಿದ್ದು ಸಾಮಾನ್ಯ ವರ್ಗದ ಪ್ರೇಕ್ಷಕರನ್ನೂ ರಂಜಿಸುತ್ತದೆ.

ದೇವೇಂದ್ರ ಕೊರವಂಜಿಯ ಕಥಾವಸ್ತುವು ಮೇಲು ನೋಟಕ್ಕೆ ಗದ್ಯಾತ್ಮಕವಾಗಿ ತೋರಿದರೂ ಅದರಲ್ಲಿನ ಹಾವ–ಭಾವ, ಅಭಿನಯ, ಭಾವ–ಭಂಗಿ, ವೇಷ–ಭೂಷಣ, ಅಲಂಕರಣ, ನಿರೂಪಣೆ–ಇವುಗಳೆಲ್ಲಾ ಕ್ರಮವಾಗಿ ನಾಟಕದ ಸುರುಳಿ ಬಿಚ್ಚಿಕೊಳ್ಳುತ್ತಾ ಹೋದಂತೆ ಹೆಚ್ಚಿನ ಪ್ರಾಶಸ್ತ್ಯವನ್ನು ಪಡೆದುಕೊಂಡಿವೆ. ಇವೆಲ್ಲಾ ನಾಟಕದ ವಿಶಿಷ್ಟ ಲಕ್ಷಣವೂ ಹೌದು. ಈ ನೃತ್ಯ–ನಾಟಕದಲ್ಲಿ ಒಟ್ಟು–95–ದರು ಅಥವಾ ಗೀತೆಗಳಿವೆ. ಇವೆಲ್ಲಕ್ಕೂ ರಾಗ ಮತ್ತು ತಾಳಗಳನ್ನು ನಿರ್ದೇಶಿಸಿದ್ದಾನೆ. ಆರ್ಯ ಛಂದಸ್ಸಿನ ವೃತ್ತದಲ್ಲಿ ರಚಿತವಾಗಿರುವ–47–ಶ್ಲೋಕಗಳಿವೆ. ಪ್ರವೇಶಿಕಿ, ಸಂವಾದ ಮತ್ತು ಸ್ವಗತವೆಂಬ ಮೂರೂ ಬಗೆಯ ದರು ಅಥವಾ ಗೀತೆಗಳನ್ನು ಇಲ್ಲಿ ಬಳಸಲಾಗಿದೆ. ಈ ಗೀತೆಗಳ ಮಧ್ಯ ಮಧ್ಯದಲ್ಲಿ ಗದ್ಯವಿದ್ದರೂ ಸಹ ಇಡೀ ರಚನೆಯನ್ನು ಕೀರ್ತನೆಯ ರೂಪದಲ್ಲಿಯೂ ಸಹ ನಿರೂಪಿಸಬಹುದು. ಶೃಂಗಾರರಸವನ್ನು ಚಿತ್ರಿಸುವುದಕ್ಕೆ ಇಲ್ಲಿ ಅವಕಾಶ ಇಲ್ಲದಿರುವುದರಿಂದ, ಕೆಲವು ಪ್ರಸಂಗಗಳಲ್ಲಿ ಅಲ್ಲಲ್ಲಿ ಹಾಸ್ಯ ಮತ್ತು ಅದ್ಭುತ ರಸವನ್ನು ಚಿತ್ರಿಸಲಾಗಿದೆ.

ದೇವೇಂದ್ರ ಕೊರವಂಜಿಯಲ್ಲಿ ಪ್ರೌಢ ಮತ್ತು ಆಡುಮಾತಿನ ಮರಾಠಿ ಭಾಷೆ ಯನ್ನು ಬಳಸಿದ್ದಾನೆ. ತಂಜಾವೂರಿನಲ್ಲಿ ಮರಾಠಾ ರಾಜರ ಆಡಳಿತ ಕಾಲದಲ್ಲಿ ಬಳಸು ತ್ತಿದ್ದ ತಂಜಾವೂರು ಮರಾಠಿ ಭಾಷೆಯ ಸ್ವರೂಪವನ್ನು ಮತ್ತು ಮರಾಠಿ ಶಬ್ದಗಳ ಬಹಳಷ್ಟು ಉದಾಹರಣೆಗಳನ್ನು ಇಲ್ಲಿ ಕಾಣಬಹುದು. ದಕ್ಷಿಣ ಭಾರತದಲ್ಲಿ ನೆಲಸಿರುವ ಮರಾಠಿಗರು ಈಗಲೂ ತಂಜಾವೂರು ಮರಾಠಿ ಭಾಷೆಯನ್ನು ಆಡುತ್ತಾರೆ.

ಈ ಆಧುನಿಕ ಯುಗದಲ್ಲಿ ಸ್ವಾತಂತ್ರ್ಯ ಚಳುವಳಿ, ಕುಡಿತದ ದುಷ್ಪರಿಣಾಮ, ಬಡತನ. ವರದಕ್ಷಿಣೆ ಪದ್ಧತಿ, ಪರಿಸರ ಮಾಲಿನ್ಯ–ಈ ಬಗೆಯ ವಸ್ತುಗಳನ್ನು ನೃತ್ಯ-ನಾಟಕದ ಮಾಧ್ಯಮದ ಮೂಲಕ ಪರಿಣಾಮಕಾರಿಯಾಗಿ ನಿರೂಪಿಸಲಾಗುತ್ತಿದೆ. ಅಂದಮೇಲೆ ಜಾಗತಿಕ ಭೂಗೋಳದಂತಹ ವಸ್ತುವನ್ನೊಳಗೊಂಡ ಈ ನೃತ್ಯ ನಾಟಕವೂ ಕೂಡ ಪ್ರೇಕ್ಷಕರಲ್ಲಿ ಆಸಕ್ತಿಯನ್ನುಂಟುಮಾಡುವುದರಲ್ಲಿ ಅನುಮಾನವಿಲ್ಲ. ವಿಶಿಷ್ಟವಾದ ದೇಶಕ್ಕೆ ಸಂಬಂಧಪಟ್ಟ ಗೀತೆಗಳನ್ನು ಆಯ್ದುಕೊಂಡು ಸಮರ್ಥರಾದ ಕಲಾವಿದರು ಸಾಂಸ್ಕೃತಿಕ ಪ್ರವಾಸಕ್ಕೆಂದು ವಿದೇಶಗಳಿಗೆ ಹೋದಾಗ ಆಯಾದೇಶಗಳಲ್ಲಿ ಅಥವಾ ವಿಶ್ವ ಸಮ್ಮೇಳನಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ಈ ನೃತ್ಯ ನಾಟಕವನ್ನು ಪ್ರದರ್ಶಿಸಬಹುದು.

ದೇವೇಂದ್ರ ಕೊರವಂಜಿಯು ಮರಾಠಿ ಭಾಷೆಯಲ್ಲಿದೆ. ದಕ್ಷಿಣ ಭಾರತೀಯ ಶೈಲಿಯಲ್ಲಿ ರಚಿತವಾಗಿದೆ, ಇದರ ಶೀರ್ಷಿಕೆ ತಮಿಳು ಭಾಷೆಯಲ್ಲಿದೆ. ಇದರ ವಸ್ತುವಾದರೋ ಜಾಗತಿಕ ಭೂಗೋಳ. ಇಷ್ಟು ವೈವಿಧ್ಯಮಯವಾಗಿರುವ ಈ ಕೃತಿಯು ರಾಷ್ಟ್ರೀಯ ಭಾವೈಕ್ಯ ಮಾತ್ರವಲ್ಲದೆ ವಿಶ್ವದ ಐಕ್ಯತೆಯ ಸುಂದರ ಕಲ್ಪನೆಯನ್ನೂ ಹೊಂದಿರುವುದರಿಂದ ಅತ್ಯಂತ ಮಹತ್ವದ್ದಾಗಿದೆ. ಕಲಾಪ್ರೇಮಿಗಳು ಇನ್ನೂ ಹೆಚ್ಚಿನ ಪರಿಶೋಧನೆ ನಡೆಸಿದ್ದೇ ಆದರೆ ಭಾರತದ ಬೇರೆ ಬೇರೆ ಭಾಗಗಳಲ್ಲಿ ಹುದುಗಿರುವ ದೇವೇಂದ್ರ ಕೊರವಂಜಿಯಂತಹ ಇನ್ನೆಷ್ಟೋ ರತ್ನಗಳನ್ನು ಹೊರತೆಗೆಯಬಹುದು!!

# ಹೈದರಾಬಾದು ಕರ್ನಾಟಕದ ಜೈನ ಸಾಹಿತ್ಯ

**ಡಾ. ಕಮಲಾ ಹಂಪನಾ**

ಅಖಂಡ ಕರ್ನಾಟಕದ ನೆಲೆ ಮತ್ತು ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯವನ್ನು ಸಮೀಕ್ಷಿಸಿ ವಿವೇಚಿಸುವುದಕ್ಕೆ ಇರುವ ಅರ್ಥವಂತಿಕೆ ಮತ್ತು ಔಚಿತ್ಯಗಳು ಕರ್ನಾಟಕದ ಬಿಡಿ ಭಾಗಗಳ ಅಥವಾ ಒಂದೊಂದು ಧರ್ಮದವರ ರಚನೆಗಳ ಸಾಹಿತ್ಯವನ್ನು ಪರಿಶೀಲಿಸುವುದರಲ್ಲಿ ಇದೆಯೆ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಸಮಷ್ಟಿ ಸ್ವರೂಪವೆನ್ನುವುದು ವ್ಯಷ್ಟಿಗಳ ಸೇರ್ಪಡೆಯಿಂದ ಸಂಭವಿಸುವ ಸಮುದಾಯ ಸಾಧ್ಯತೆಯೆಂಬುದನ್ನು ಮರೆಯಲಾಗದು. ಕನ್ನಡ ಸಾಹಿತ್ಯದಲ್ಲಿ ಹೈದರಾಬಾದು ಕರ್ನಾಟಕ (ಹೈ.ಕ,) ಮೈಸೂರು ಕರ್ನಾಟಕ (ಮೈ.ಕ.) ಬಳ್ಳಾರಿ ಕರ್ನಾಟಕ (ಬ.ಕ,) ಎಂಬೆಲ್ಲ ವಿಭಜನೆಗಳು ಅಧ್ಯಯನದ ಅನುಕೂಲಕ್ಕಾಗಿ ಹೇಳುವ ಮಾತೇ ಹೊರತು- ಅದರಲ್ಲಿ ರಾಜಕೀಯ ಒಡಕುಧ್ವನಿಗಳಲ್ಲ.

ಹೈದರಾಬಾದು ಕರ್ನಾಟಕದ ಜೈನ ಸಾಹಿತ್ಯ ಕುರಿತು ಪರಾಮರ್ಶೆಗೆ ತೊಡಗುವುದಕ್ಕೆ ಮೊದಲು ಒಂದು ತೊಡಕನ್ನು ತೊಡೆದುಹಾಕಬೇಕಾದ್ದಿದೆ. ಗುಲ್ಬರ್ಗ, ಬೀದರ್, ರಾಯಚೂರು ಜಿಲ್ಲೆಗಳನ್ನೊಳಗೊಂಡ ಈ ಭೂಪ್ರದೇಶವನ್ನು ಆಳಿದ ಅರಸು ಮನೆತನಗಳಲ್ಲಿ ಕನ್ನಡ ಸಾಹಿತ್ಯ ಅದರಲ್ಲಿಯೂ ಜೈನ ಸಾಹಿತ್ಯದ ದೃಷ್ಟಿಯಿಂದ ಪ್ರಮುಖವಾದದ್ದು ರಾಷ್ಟ್ರಕೂಟದ ಮತ್ತು ಪಶ್ಚಿಮ (ಕಲ್ಯಾಣಿ) ಚಾಲುಕ್ಯರದು. ಕಲಚೂರ್ಯರು ಮೊದಲಾದ ಕೆಲವು ದೊಡ್ಡ ಸಣ್ಣ ರಾಜವಂಶಗಳ ಕಾಲದಲ್ಲಿಯೂ ಕನ್ನಡ ಸಾಹಿತ್ಯದ ಜೀವಸ್ವರ ಕೇಳಿಸುತ್ತದೆಂಬುದು ನಿಜ ; ಆದರೆ ಈ ಸಂಪ್ರಬಂಧವು ಕರ್ನಾಟಕದ ಕವಿಚರಿತೆಯ ಇನ್ನೊಂದು ಸಂಪುಟ ಬರೆಯುವ ಉದ್ದೇಶ ಹೊಂದಿಲ್ಲ. ಹೈ.ಕ,ದ ಜೈನ ಸಾಹಿತ್ಯದ ತಿರುಳು ಅಥವಾ ಕೆನೆಯನ್ನು ತೋರಿಸುವ ಆಶಯ.

ಜೈನ ನ್ಯಾಯ-ತರ್ಕ-ಸಿದ್ಧಾಂತಗಳಲ್ಲಿ ಪಾರಂಗತರೆನಿಸಿದ ಮೇಧಾವಿಗಳು ಅಕಲಂಕಾಚಾರ್ಯರು, ಇವರನ್ನು ಭಟ್ಟಾಕಳಂಕರೆಂದು ಕರೆದಿದೆ. ತಾರ್ಕಿಕ ಚೂಡಾ ಮಣಿ, ಜಿನ ಶಾಸನ ದೀಪಿಕ, ಎಂಬಿತ್ಯಾದಿ ಪ್ರಶಸ್ತಿಗಳಿಂದ ಖ್ಯಾತರಾದ ಅಕಲಂಕ ದೇವರು ಜೈನ ನ್ಯಾಯಶಾಸ್ತ್ರ ಪ್ರತಿಷ್ಠಾಪಕರು. ಶ್ರವಣಬೆಳಗೊಳದ ಶಾಸನಗಳಲ್ಲಿ ಅಗಾಧ ವಿದ್ವತ್ತಿನ ಮಹಿಮೆ ಕೀರ್ತಿತವಾಗಿದೆ. ಸಂಸ್ಕೃತದಲ್ಲಿ ಪ್ರಾರಂಭದಲ್ಲಿ ರಚಿತ

ವಾದ ಜೈನಾಗಮಗಳ ಸಾಲಿಗೆ ಸೇರಿದ ಕೃತಿ ಉಮಾಸ್ವಾಮಿಯ ತತ್ವಾರ್ಥಸೂತ್ರ [ಕ್ರಿ.ಶ. 1-2 ನೆ.ಶ.]. ಈ ಕೃತಿಗೆ ಆಚಾರ್ಯ ಅಕಲಂಕರು ತತ್ವಾರ್ಥ ರಾಜವಾರ್ತಿಕವೆಂಬ ಟೀಕೆ ಬರೆದಿದ್ದಾರೆ. ಅವರಂತೆ ಅಕಲಂಕಾಚಾರ್ಯರು (ಸಮಂತಭದ್ರಾಚಾರ್ಯರ) 'ಆಪ್ತಮೀಮಾಂಸಾ' ಎಂಬ ಕೃತಿಗೆ 'ಅಷ್ಟಶತೀ' ಎಂಬ ಭಾಷ್ಯವನ್ನು ಬರೆದಿದ್ದಾರೆ. ಅಕಳಂಕಾಚಾರ್ಯರ ಇನ್ನಿತರ ಕೃತಿಗಳು : ನ್ಯಾಯವಿನಿಶ್ಚಯ, ಪ್ರಮಾಣ ಸಂಗ್ರಹ, ಲಘೀಯ ಸ್ತ್ರಯ, ಸಿದ್ಧಿವಿನಿಶ್ಚಯ–ಇತ್ಯಾದಿ.

ಅಕಳಂಕಾಚಾರ್ಯರು ಜೈನಧರ್ಮದ ನೇತಾರರಾಗಿನಿಂತು ಬೌದ್ಧಧರ್ಮದವರೊಡನೆ ಅನೇಕ ವಾದಗಳಲ್ಲಿ ಗೆದ್ದು ದಿಗ್ವಿಜಯ ಸಂಪಾದಿಸಿದರು. ಇವರ ಕಾಲ ಕ್ರಿ.ಶ. ಏಳನೆಯ ಶತಮಾನ. ಈ ಅವಧಿಯಲ್ಲಿ ಪ್ರಾಚೀನ ನಳಂದ ವಿಶ್ವವಿದ್ಯಾಲಯದಲ್ಲಿ ಧರ್ಮಪಾಲರ ನೇತೃತ್ವದಲ್ಲಿ ಬೌದ್ಧಧರ್ಮ ವಿಜೃಂಭಿಸುತ್ತಿತ್ತು. ಅಕಲಂಕರು ಅಹಿಂಸೆ ಮತ್ತು ಸ್ಯಾದ್ವಾದದ ಧ್ವಜವನ್ನು ಎತ್ತಿ ಹಿಡಿದರು. ಮಾನ್ಯಖೇಟವೂ ಅಕಲಂಕರ ಕರ್ಮಭೂಮಿಯಾಗಿತ್ತು ; ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಅವರಿಗೆ ಪೂರ್ಣ ಗೌರವವಿತ್ತು. ಹೈ.ಕ.ದ ಜೈನ ಸಾಹಿತ್ಯದ ಉದ್ಘಾಟನೆ ಮಾಡಿದ ಆದ್ಯರಲ್ಲೊಬ್ಬರೆಂದು ಅಕಲಂಕಾಚಾರ್ಯರನ್ನು ಪರಿಗಣಿಸುವುದರಲ್ಲಿ ಔಚಿತ್ಯವಿದೆ. ಏಕೆಂದರೆ ಮಾನ್ಯಖೇಟದ ರಾಷ್ಟ್ರಕೂಟರ ದೊರೆಯಾದ ಶುಭತುಂಗನ ಮಂತ್ರಿ ಪುರುಷೋತ್ತಮ ಮತ್ತು ಆತನ ಪತ್ನಿ ಪದ್ಮಾವತಿ ಇವರ ಪುತ್ರನೇ ಅಕಳಂಕನು. [ಹಂಪನಾ : 1976 : 72–76]

ಕೇವಲ ಹೈದರಾಬಾದು ಕರ್ನಾಟಕವೇ ಅಲ್ಲದೇ ಇಡೀ ಕನ್ನಡ ಸಾಹಿತ್ಯದ ಶ್ರೇಷ್ಠ ಗದ್ಯಕೃತಿ 'ವಡ್ಡಾರಾಧನೆ' ಎಂಬ ಹೆಸರಿನಿಂದ ಪ್ರಖ್ಯಾತವಾಗಿರುವ, 'ಆರಾಧನಾ ಕರ್ಣಾಟ ಟೀಕಾ' ಇತ್ತೀಚಿಗೆ ಡಾ. ಹಂಪ ನಾಗರಾಜಯ್ಯ ನಡೆಸಿರುವ ಸಂಶೋಧನೆ ಯಿಂದಾಗಿ ಈ ಗ್ರಂಥದ ವಿಚಾರವಾಗಿ ಇದುವರೆಗೆ ಇದ್ದ : ತಿಳುವಳಿಕೆಯೆಲ್ಲ ಬುಡ ಮೇಲಾಗಿದೆ. ಅದರ ಪ್ರಕಾರ ಕನ್ನಡದ ಮೊತ್ತ ಮೊದಲನೆಯ ಉಪಲಬ್ಧ ಕೃತಿ ವಡ್ಡಾರಾಧನೆ ; ಭ್ರಾಜಿಷ್ಣುವೇ ಕರ್ತೃ. ಪ್ರಾಕೃತ ಪರಂಪರೆಯ ಆರಾಧನಾ ಗ್ರಂಥಕ್ಕೆ (ಮೂಲಾರಾಧನಾ, ಭಗವತೀ ಆರಾಧನಾ). ಕ್ರಿ. ಶ. 800ರಲ್ಲಿ ಭ್ರಾಜಿಷ್ಣುವು ಬರೆದ ಕನ್ನಡ ಟೀಕಾ ಗ್ರಂಥವೇ 'ಆರಾಧನಾ ಕರ್ಣಾಟ ಟೀಕಾ', ಇದು ಅರಮನೆಯಲ್ಲಿ ಹುಟ್ಟಿ ದ್ದಲ್ಲ, ಜೈನ ಸಮಾಜದಲ್ಲಿ ರಚಿತವಾದ, ಯಾರ ಹಂಗು ಹಸಾದಗಳಿಲ್ಲದೆ ಒಲಿದಂತೆ ಹಾಡಿದ ರಚನೆ. ರಾಷ್ಟ್ರಕೂಟರ ಆಳ್ವಿಕೆಯಲ್ಲಿ, ರಾಜಧಾನಿ ಮಾನ್ಯಖೇಟದಲ್ಲಿ ರಚಿತವಾದ ವಡ್ಡಾರಾಧನೆಯ ಕರ್ತೃ. ಭ್ರಾಜಿಷ್ಣುವು ಈಗಿನ ಬೀದರ್ ಜಿಲ್ಲೆಯ ಹಳ್ಳಿಖೇಡದವನು.

[ಹಂಪನಾ : 1993 : ಪೀಠಿಕೆ]

ವಡ್ಡಾರಾಧನೆ ಕನ್ನಡ ಸಾಹಿತ್ಯದ ಮಹತ್ವದ ಕೃತಿಗಳಲ್ಲೊಂದು ಅದು ಕನ್ನಡ-ಗದ್ಯ ಸಾಹಿತ್ಯದ ಮುಹು ಮಾಣಿಕ್ಯ ಗ್ರಂಥ. ಚಂಪುವಿಗೆ ಪಂಪ, ರಗಳೆಗೆ ಹರಿಹರ, ಷಟ್ಪದಿಗೆ ಕುಮಾರವ್ಯಾಸ, ತ್ರಿಪದಿಗೆ ಸರ್ವಜ್ಞ, ಸಾಂಗತ್ಯಕ್ಕೆ ರತ್ನಾಕರವರ್ಣಿ ಹೇಗೊ ಹಾಗೆ ಕನ್ನಡ ಗದ್ಯಕ್ಕೆ ಭ್ರಾಜಿಷ್ಣು. ಕಾಲದ ಅಗ್ನಿ ಪರೀಕ್ಷೆಯಲ್ಲಿ ಸಾವಿಲ್ಲದೆ ಹಾದು ಬಂದ ಭ್ರಾಜಿಷ್ಣುವಿಗೆ ಮುಪ್ಪು ಇಲ್ಲ. ಸಂಸ್ಕೃತ ಸಾಹಿತ್ಯದ ಬಾಣಭಟ್ಟನ ಕಾದಂಬರಿಯಂತೆ ಕನ್ನಡ ಗದ್ಯ ಸಾಹಿತ್ಯದಲ್ಲಿ ಭ್ರಾಜಿಷ್ಣುವಿನ ಆರಾಧನಾ ಕರ್ಣಾಟ ಟೀಕಾ ಅನನ್ಯ ಆಚಾರ್ಯ ಕೃತಿ.

ಪೂರ್ವಿಕರಿಂದ ತನ್ನ ಕಾಲದವರೆಗೆ ಪರಂಪರೆಯಾಗಿ ಹರಿದು ಬಂದ ಗುಣಾತಿಶಯವುಳ್ಳ ಸಂಪದ್ಭರಿತ. ಸಂಪ್ರದಾಯ ದರ್ಶನ ಪದ್ಧತಿ ಹಾಗೂ ಪುರಾಣ ಕಥಾ ಸ್ವರೂಪ ಪದ್ಧತಿಯನ್ನು ಬೊಗಸೆಯಲ್ಲಿ ತೀವಿಕೊಂಡು ಮೊಗೆ ಮೊಗೆದು ಕೊಟ್ಟಿದ್ದಾನೆ. ಕನ್ನಡ ಪ್ರೇಮದಿಂದ ಮಾಡಿರುವ ಈ ಅಹೇತುಕ ಕಾಯಕದಿಂದ ಕನ್ನಡ ನುಡಿ ಭಂಡಾರ ಮಾಣಿಕ ಪಟ್ಟಿಸ ಭಂಡಾರವಾಗಿದೆ. ಇಷ್ಟು ಉಪಕಾರ ಮಾಡಿಯೂ ಮೊನ್ನೆ ಮೊನ್ನೆಯವರೆಗೆ ಮರೆಯಲ್ಲೇ ನಿಂತು ಒಬ್ಬ ಅಜ್ಞಾತನಂತೆ ಮಾತಾಡುತ್ತಿದ್ದು ಇದೀಗ ತನ್ನ ಕಾಲನ ಅವಕುಂಠನವನ್ನು ಸರಿಸಿ ಭ್ರಾಜಿಷ್ಣುವಾಗಿ ವಿರಾಜಮಾನನಾದ ಕವಿ ವಿಭೂತಿಗೆ ಕನ್ನಡ ಋಣಿ. 'ಪದ್ಯಂ ಸಮಸ್ತ ಜನತಾ ಹೃದ್ಯಂ'–ಎಂಬುದು ಕವಿರಾಜ ಮಾರ್ಗ ವಿವೇಕೋಕ್ತಿ. ಭ್ರಾಜಿಷ್ಣುವಿನಂಥ ಗದ್ಯವಿರುವುದಾದರೆ ಗದ್ಯಂ ಸಮಸ್ತ ಜನತಾ ಹೃದ್ಯಂ ಎಂದೂ, ಹೃದ್ಯಮಪ್ಪ ಭ್ರಾಜಿಷ್ಣುವಿನ ಗದ್ಯದೊಳೆ ಪೇಳ್ವುದು ಎಂದೂ ಹೇಳಬಹುದು.

ಭ್ರಾಜಿಷ್ಣು ಸಣ್ಣ ಪುಟ್ಟ ಪಾತ್ರಗಳ ಮೂಲಕ, ಅಪ್ರಧಾನವೆನಿಸಬಹುದಾದ ಘಟನೆಗಳ ಮೂಲಕ ಧ್ವನಿಸುವ ಮಾನವ ಸ್ವಭಾವದ ಚಿತ್ರಣ ವಿಶ್ಲೇಷಣೆ ಆತನ ಸೂಕ್ಷ್ಮ ಮತ್ತು ಪಾರದರ್ಶಕ ಗ್ರಹಿಕೆಗೆ ಸಾಕ್ಷಿಯಾಗಿದೆ. ಹಳ್ಳಿಗರನ್ನು ವಂಚಿಸುವ ಪಟ್ಟಣಿಗ ವರ್ತಕರು, ಹಳ್ಳಿಯ ಒಕ್ಕಲು ಮಕ್ಕಳು ತಾವು ಬೆಳೆದ ಬೆಳೆಯನ್ನು ನಗರಗಳ ವ್ಯಾಪಾರ ಕೇಂದ್ರವಾದ ಸಂತೆ ಮಾರುಕಟ್ಟೆಗೊಯ್ದು ಮಾರುವುದರಲ್ಲಿ ಬೇಸ್ತು ಬೀಳುವುದು, ಬಿಸಿ ಬಿಸಿಯಾಗಿ ಅಟ್ಟು ಕಂಚಿನ ತಟ್ಟೆಯಲ್ಲಿಟ್ಟು ಬಡಿಸುವ ಅಡುಗೂಲಜ್ಜಿಯ ಆದರಾತಿಥ್ಯದಲ್ಲಿ ತೋರಿ ಬರುವ ಜಾಣ್ಮೆಯ ಮಾತುಗಾರಿಕೆ, ವೈಭವೋಪೇತ ಸಿರಿವಂತರ ನೆರೆಯಲ್ಲಿಯೇ ಇರುವ ನೆಲ ಕಚ್ಚಿದವರು–ಹೀಗೆ ವೈದೃಶ್ಯಗಳನ್ನು ಒಡ್ಡುತ್ತ ಅಂದಿನ ಸಮಾಜದ ಎರಡೂ ತುದಿಗಳಿಗೆ ಭ್ರಾಜಿಷ್ಣು ಕನ್ನಡಿ ಹಿಡಿಯುತ್ತಾನೆ. ಕನ್ನಡ ಜನಪದರನ್ನು ನಗಿಸಿ ನಲಿಸುವ ಕಲಾವಿದರು ಮರದ ಮುಖವಾಡಗಳನ್ನು ತೊಟ್ಟು ಪಗರಣಿಗರಾಗಿ ಆಡುವ-ಹಾಡುವ ಬಯಲಾಟಗಾರರು ಸಹ ಭ್ರಾಜಿಷ್ಣುವಿನ ಹದ್ದುಗಣ್ಣಿನಿಂದ ಪಾರಾಗದೆ ಸುಳಿಯುತ್ತಾರೆ. ಕನ್ನಡ ಭಾಷೆಯ ಭಂಡಾರದ ಕಲಾತ್ಮಕ ಅಭಿವ್ಯಕ್ತಿಯಾಗಿ

ಭ್ರಾಜಿಷ್ಣುವಿನ 19 ಕಥೆಗಳ 'ಆರಾಧನಾ ಕರ್ಣಾಟ ಟೀಕಾ'—ಒಂದು ಚಿರಂಜೀವ ಕೃತಿಯಾಗಿದೆ.

ಭ್ರಾಜಿಷ್ಣುವಿನ ಆರಾಧನಾ ಕರ್ಣಾಟ ಟೀಕಾದ ಮೊದಲೂ, ಅನಂತರವೂ ಕವಿರಾಜಮಾರ್ಗದವರೆಗೆ ರಚಿತವಾಗಿರುವ ಯಾವ ಕನ್ನಡ ಕೃತಿಯೂ ಸಹ ದೊರೆತಿಲ್ಲ. ಕವಿರಾಜಮಾರ್ಗದ ಕರ್ತೃತ್ವದ ವಿಚಾರವಾಗಿ ನಡೆದಿರುವ ಚರ್ಚೆಯನ್ನೇ ಮತ್ತೆ ಚರ್ಚಿತ ಚರ್ವಣಗೊಳಿಸುವುದರಲ್ಲಿ ಸುಖವಿಲ್ಲ. ಶ್ರೀ ವಿಜಯನು ಬರೆದಿರುವ ಚಂದ್ರ ಪ್ರಭ ಪುರಾಣವೆಂಬ ಜೈನ ತೀರ್ಥಂಕರ ಚರಿತೆ ಮತ್ತು ರಘುವಂಶ ಪುರಾಣ ಸಿಕ್ಕಿಲ್ಲ. ಈಗ ಲಭ್ಯವಿರುವ ಕವಿರಾಜಮಾರ್ಗ ಶ್ರೀ ವಿಜಯ ಕವಿಯ ಹೆಸರನ್ನು ಅಜರಾಮರಗೊಳಿಸಿದೆ. ಶ್ರೀ ವಿಜಯನ ಪ್ರಭುನಿಷ್ಠೆ ಕುರಿತು ಅನುಮಾನಗಳಿಲ್ಲ. ನೃಪತುಂಗನು ತನ್ನ ಜೈನ ಧರ್ಮೀಯನೆಂದೂ ಏನೋ, ರಾಜನ ವಿಚಾರದಲ್ಲಿ ಅಪಾರವಾದ ಗೌರವಾದರ ವಾತ್ಸಲ್ಯ ವನ್ನು ಪ್ರಕಟಿಸಿದ್ದಾನೆ. ರಾಜಸತ್ತೆಯ ಪರಾಕಾಷ್ಠ ಸ್ಥಿತಿಯಲ್ಲಿ ಅರಮನೆಯ ಕವಿಗಳು ತಮ್ಮ ಲೇಖಣಿಯನ್ನು ಒಡ್ಡೋಲಗಕ್ಕೆ ಒತ್ತೆಇಟ್ಟು ತಮ್ಮ ಕಾವ್ಯವು ರಾಜ ಬರೆದದ್ದೇ ಎಂದು ಹೇಳಿಕೊಳ್ಳುವಂತಾಗಿರುವುದು ಔದಾರ್ಯವೋ, ದಾಸ್ಯವೋ ಎಂದು ಪ್ರಶ್ನಿಸು ವಂತಾಗಿದೆ. ಪಂಪನಿಗೆ ಸ್ವಾಮಿನಿಷ್ಠೆಯಿದ್ದರೂ, ಕನ್ಯೆಯನ್ನೂ ಕಾವ್ಯವನ್ನೂ ಕೊಡುವುದಾದರೆ ಅರಿಕೇಸರಿಗೆ ಕೊಡಬೇಕೆಂದು ಹೇಳಿದರೂ ತನ್ನ ಕೃತಿಯ ಕರ್ತೃತ್ವ ಸ್ವಾಮ್ಯವನ್ನು, ಕಾಪಿರೈಟನ್ನು ರಾಜನಿಗೆ ಬಿಟ್ಟುಕೊಡಲಿಲ್ಲ.

ಶ್ರೀ ವಿಜಯನು ನೃಪತುಂಗನ ಪರನೆಂಬುದು ಎಷ್ಟು ನಿಜವೋ ಅಷ್ಟೇ ದಿಟ ಆತ ಕನ್ನಡ ಜನಪದದ ಪರ ಎಂಬುದು. ಇಡೀ ಕನ್ನಡ ಕವಿಕಾವ್ಯ ಪರಂಪರೆಯಲ್ಲಿ ಶ್ರೀ ವಿಜಯನಂಥ ಕನ್ನಡ ನಾಡು ನುಡಿಗಳ ಉತ್ಕಟ ಅಭಿಮಾನಿ ಇನ್ನೊಬ್ಬರಿಲ್ಲ. ಕನ್ನಡ ಭಾಷೆಯಲ್ಲಿ ಸಿಗುವ ನೂರಾರು ಶಾಸನಗಳೂ ಕಾವ್ಯಗಳೂ ರಾಜ ಮಹಾರಾಜರ, ಸಾಮಂತ ಮನ್ನೆಯರ, ಮಹಾ ಮಂಡಲೇಶ್ವರರ, ಧರ್ಮಗುರುಗಳ ಪರಾಕು ಪಂಪನ್ನು ಒತ್ತಿವೆ. ಪ್ರಭು ಪ್ರಭಾವಳಿಯೊಂದಿಗೆ, ಪ್ರಜಾ ಸಮೂಹವನ್ನೂ ತಬ್ಬಿಕೊಂಡು ಕನ್ನಡ ನಾಡ ಗೀತೆಯನ್ನು ಹಾಡಿದ ಪಂಪನ ನಾಲ್ಕು ಪದ್ಯಗಳಿಗಿಂತ ನೂರುವರ್ಷ ಹಿಂದೆಯೇ ಕವಿರಾಜಮಾರ್ಗ ಕಸಿ ಮಾಡಿದ ಕನ್ನಡ ತೋಟ ತಂಪು ನೀರ್ದಾಣವಾಗಿ ಪ್ರಿಯವಾಗುತ್ತದೆ.

'ಕವಿರಾಜಮಾರ್ಗ' ವಾಸ್ತವವಾಗಿ ಕಾವ್ಯವೂ ಅಲ್ಲ, ಸ್ವತಂತ್ರ ಕೃತಿಯೂ ಅಲ್ಲ. ಅದು ಸಂಸ್ಕೃತ ಭಾಮಹ-ದಂಡಿಯರ ಲಕ್ಷಣ ಗ್ರಂಥಗಳನ್ನು ಆಧರಿಸಿ ಬರೆದ ಶಾಸ್ತ್ರ ಗ್ರಂಥ. ಸಾಮಾನ್ಯ ಶಾಸ್ತ್ರ ಜಡವಾಗಬಹುದಿದ್ದ ಇಂಥದೊಂದು ಕೃತಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ತನ್ನ ಹೆಸರನ್ನು ಅನ್ವರ್ಥಕಗೊಳಿಸಿ ಅಜರಾಮರವಾಗಲು ಕಾರಣಗಳು ಬೇರೆಯೇ ಇವೆ. ಅದು ಕನ್ನಡವನ್ನೂ ಕನ್ನಡಿಗರನ್ನೂ ಕನ್ನಡ ನಾಡನ್ನೂ ತನ್ನ

ಒಡಲ ಕಂದಮ್ಮಗಳೆಂದು ಹೆಗಲಮೇಲೆ ಹಿಡಿದು ಎತ್ತಿ ನಿಲ್ಲಿಸಿ ಲೋಕಕ್ಕೆ ತೋರಿಸಿದ ಹೃದಯವಂತಿಕೆ :

ಕಾವೇರಿಯಿಂದಮಾ ಗೋ
ದಾವರಿವರಮಿರ್ದನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸು
ಧಾವಲಯ ವಿಲೀನ ವಿಶದ ವಿಷಯ ವಿಶೇಷಂ ॥

ಅದಱೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣನಗರದಾ ಪುಲಿಗೆಱೆಯಾ
ಸದಭಿಸ್ತುತ ಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ॥

ಪದನಱಿದು ನುಡಿಯಲುಂ ನುಡಿ
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ
ದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್ ॥

ಕುಱಿತವರಲ್ಲದೆ ಮತ್ತಂ
ಪೆಱರುಂ ತಂತಂಮ ನುಡಿಯೊಳೆಲ್ಲರ್ ಜಾಣರ್
ಕಿಱುವಕ್ಕಳುಮಾ ಮೂಗರು
ಮಱಿಪಲ್ಕಱಿವರ್ ವಿವೇಕಮಂ ಮಾತುಗಳಂ ॥

ಕಸವರಮೆಂಬುದು ನೆಱೆ ಸೈ
ರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ
ಕಸವೇರಿ ಕಸವರಮೇನು
ಬ್ಬಸಮಂ ಬಸಮಲ್ಲದಿರ್ದ್ದ ಮಾಡುವದೆಲ್ಲಂ ॥

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತ ಪ್ರಕಾರಮಿದು ಸುಖಮಿದು ದು :
ಖೋಪಾತ್ತಮಿದೆಂದಱಿಪುಗು
ಮಾ ಪರಮ ಕವಿ ಪ್ರಧಾನರಾ ಕಾವ್ಯಂಗಳ್ ॥

ಕನ್ನಡಿಗರ ಹೃದ್ಗತವಾಗಬೇಕಾದ ಹೃದ್ಯವಾದ ಭಾವಗೀತೆಯಂಥ ಪದ್ಯಗಳು ಈ ಕೃತಿಯಲ್ಲಿ ಹರಳುಗೊಂಡಿವೆ. ಇಂಥ ಸುಮಾರು 25 ಪದ್ಯಗಳನ್ನು ತನಿಯಾಗಿ ತೆಗೆದಿಟ್ಟರೆ [ಅದೇ ಕನ್ನಡಿಗರಣಮೋಕಾರ ಮಂತ್ರ, ಪಂಚಾಕ್ಷರಿ, ಗಾಯತ್ರಿ, ಖುರಾನ್, ಬೈಬಲ್ಲು, ಗ್ರಂಥ ಸಾಹೇಬ್ ಎಲ್ಲವೂ ಆಗಬಲ್ಲದು] ಈ ಪದ್ಯಗಳು ಕನ್ನಡ ವಿಶ್ವವಿದ್ಯಾಲಯದ ಭಿತ್ತಿಗಳಲ್ಲೂ, ಕನ್ನಡಿಗರ ಚಿತ್ತದಲ್ಲೂ ಒತ್ತಿನಿಲ್ಲಬೇಕಾದ ಅಮೃತಾಕ್ಷರಗಳು, ಇಂದಿಗೂ ತನ್ನ ಪ್ರಸ್ತುತತೆಯನ್ನು ಸ್ಥಾಪಿಸಿಕೊಂಡಿರುವ ಗತ ಇತಿಹಾಸದ ಕನ್ನಡಿಗರ ಬಾಳಿನ ಪಾಠಗಳು ವರ್ತಮಾನದ ಕನ್ನಡಿಗರನ್ನು ಕೈಹಿಡಿದು ನಡೆಸಬೇಕು.

ಕನ್ನಡಿಗರ ಗುಣಾತ್ಮಕ ಚಿತ್ರಣವನ್ನು ಕಂಡರಿಸುವುದರಲ್ಲಿ ಶ್ರೀ ವಿಜಯನಿಗೆ ನೃಪತುಂಗನು ಮಾರ್ಗದರ್ಶನ ಮಾಡಿರಬೇಕೆಂಬುದು ನನ್ನ ಊಹೆ. ಸ್ವಯಂ ಶ್ರೀ ವಿಜಯನು ಕವಿಯಾದರೂ ತನ್ನ ರಾಜ್ಯದ ಜನ-ಭಾಷೆ-ಸಂಸ್ಕೃತಿ ಸ್ವಭಾವಗಳನ್ನು ಕುರಿತ ಪದ್ಯಗಳಿಗೆ ನೃಪತುಂಗನ ಕೈವಾಡ ಇರುವುದರಿಂದಲೇ ಕವಿ ಈ ಕೃತಿಯ ಕರ್ತೃತ್ವದಲ್ಲಿ ಸಹಲೇಖಕನನ್ನಾಗಿ ನೃಪತುಂಗನನ್ನು ಸೇರಿಸಿಕೊಂಡಿರುವುದು.

ಹೀಗೆ ಸಮಕಾಲೀನ ಕನ್ನಡ ಸಮಾಜಕ್ಕೆ ಹಿಡಿದ ಮೊತ್ತ ಮೊದಲನೆಯ ಕಾವ್ಯ ದರ್ಪಣ ಕವಿರಾಜಮಾರ್ಗ. ಮೂರೇ ಪರಿಚ್ಛೇದಗಳ ಈ ಮಧ್ಯಮ ಗಾತ್ರದ ಕೃತಿಯಲ್ಲಿ ಅಲ್ಲಲ್ಲಿ ಪ್ರಾಸಂಗಿಕವಾಗಿ ಬರುವ ಪ್ರಸ್ತಾಪಗಳಲ್ಲಿ ಕೆನೆಗಟ್ಟಿದ ಚಾರಿತ್ರಿಕ, ಸಾಂಸ್ಕೃತಿಕ, ಸಾಹಿತ್ಯಕ ಮತ್ತು ಧಾರ್ಮಿಕ ಮಹತ್ವದ ಸಂಗತಿಗಳನ್ನು ವಿಮರ್ಶಕರು ತೋರಿಸಿದ್ದಾರೆ. ಆ ವೇಳೆಗೆ ಆಗಲೇ ಕನ್ನಡದಲ್ಲಿ ರಚಿತವಾಗಿದ್ದ ಸಾಹಿತ್ಯ ಭಂಡಾರ ದತ್ತ ಬೆರಳೆತ್ತಿ ತೋರಿಸುವ ಪದ್ಯ ಸೂಚನೆಗಳು ಕಣ್ಣರಳಿಸುವಂತೆ ಪ್ರಚೋದಿಸುತ್ತವೆ. ಗದ್ಯ ಕವಿಗಳನ್ನು ಪದ್ಯ ಕವಿಗಳನ್ನೂ ಪ್ರತ್ಯೇಕವಾಗಿ ಹೆಸರಿಸುತ್ತಾನೆ. ಅವನ ಈ ಸ್ಪಷ್ಟತ್ವ ಮತ್ತು ಅಸಂದಿಗ್ಧ ನೇರ ನಿರೂಪಣೆ ಮನಸೆಳೆಯುತ್ತದೆ. ನೃಪತುಂಗ ಪೂರ್ವದ ಸಮೃದ್ಧ ಜೈನ ಸಾಹಿತ್ಯಕ್ಕೆ ಹೆಬ್ಬಾಗಿಲನ್ನಲ್ಲವಾದರೂ ಒಂದು ಸಣ್ಣ ಕಿಟಕಿ ತೆರೆಯುವಂತಾದದ್ದು ಶ್ರೀ ವಿಜಯನ ಕೃಪೆ. ಜೈನರಾಮಾಯಣಕ್ಕೆ ಸಂಬಂಧಿಸಿದ ಪದ್ಯಗಳು ಆ ವೇಳೆಗೆ ಕನ್ನಡದಲ್ಲಿ ರಚಿತವಾಗಿದ್ದ ಜೈನ ಅಖಂಡ ಅಥವಾ ಕಿರು ರಾಮಾಯಣದಿಂದ ಉದ್ಧೃತಗಳೆಂದು ಹೇಳುತ್ತ ಬಂದಿದ್ದಾರೆ. ವೈಯಕ್ತಿಕವಾಗಿ ಈ ಬಗೆಯ ಸೂಚನೆಗಳಿಗೆ ನನ್ನ ಸಮ್ಮತಿಯಿಲ್ಲ. ಜೈನ ಪರಂಪರೆಯ ವಿಮಲ ಸೂರಿಯ ಪಉಮಚರಿವು, ರವಿಷೇಣನ ಪದ್ಮಪುರಾಣ ಓದಿಕೊಂಡಿದ್ದ ಶ್ರೀ ವಿಜಯನೇ ಸ್ವಯಂ ಲಕ್ಷ್ಯ ಪದ್ಯ ಮಾಲಿಕೆಯಲ್ಲಿ ಹೊಸೆದು ಪೋಣಿಸಿರುವ ಪದ್ಯ ಪುಷ್ಪಗಳೆಂಬುದು ನನ್ನ ತಿಳುವಳಿಕೆ ಅಥವಾ ಆತ ತನ್ನ ರಘುವಂಶ ಪುರಾಣದಿಂದ ತೆಗೆದುಕೊಂಡಿರಲೂ ಬಹುದು. ಅಂದರೆ ಇಂಥ ಪದ್ಯಗಳಿಗೆ ಸ್ವರಚನೆಯ ಮೌಲ್ಯವೇ ಹೊರತು ಆ ಕಾಲಕ್ಕಾಗಲೇ ಕನ್ನಡದಲ್ಲಿ ಜೈನ ರಾಮಾಯಣ ಇತ್ತೆಂದಲ್ಲ. ಶ್ರೀ ವಿಜಯನದೇ ಆದ ರಘುವಂಶ ಪುರಾಣದ ಸ್ವರೂಪ ತಿಳಿಯಬಹುದಾದರೂ ಅದರ ಹೊರತು ಕನ್ನಡದಲ್ಲಿ ಆಗಿನ್ನೂ ಜೈನ ರಾಮಾಯಣ ಅಥವಾ ಅಜೈನ ರಾಮಾಯಣ ಯಾವುದೂ ರಚಿತ ವಾಗಿರಲಿಲ್ಲ; ಕನ್ನಡದಲ್ಲಿ ಪೂರ್ಣ ಪ್ರಮಾಣದ ಮೊದಲನೆಯ ಅಥವಾ ಎರಡನೆಯ ರಾಮಾಯಣ ಪೊನ್ನನ ಭುವನೈಕ ರಾಮಾಭ್ಯುದಯವೇ ಎಂಬುದು ನನ್ನ ಖಚಿತವಾದ ನಿಲುವು.

ಶ್ರೀ ವಿಜಯನ ಸೃಜನ ಶಕ್ತಿಯ ಇನ್ನೊಂದು ಮುಖ ಅವನ ಪ್ರಸನ್ನವಾದ ಶೈಲಿಯಲ್ಲಿರುವ ದೇಸಿಯ ಸೊಸೆ. ಕನ್ನಡ ಜನಪದರ ಬದುಕಿನ ಸೊಗಡು ಶ್ರೀ ವಿಜಯನ ಉಪಮೆಗಳಲ್ಲಿ ಇಂದ್ರಿಯ ಗ್ರಾಹ್ಯವಾಗುತ್ತದೆ. ಆರ್ತನ ತೆರನರಿಯನೆ

ಮರ್ದುವೇಳ್ವ ಬೆಜ್ಜನ ತೆರದಿಂ, ಎರಡಕ್ಕೆ ಬಿಟ್ಟ ಕರುವಂ ಪೋಲ್ಗುಂ, ಒತ್ತುಂಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್ ಪರುಷತರಮಕ್ಕುಂ, ಕಾಣದಂತೆ ಕಣ್ಗಳ್ ತಮ್ಮ ಕಾಡಿಗೆಯುಂ, ತಲೆಸೂಡಿಮುನ್ನೆ ಕಜ್ಜದ ಫಲಮಂ ಬೆಸಗೊಂಡಂ, ಕೂಸಿನ ತಲೆಯೊಳ್ ಬಿಣ್ಪೊರೆಯನಿಟ್ಟವೊಲಸುಖಕರಂ, ನೆಲ್ಲುಂ ಮೊಸರುಂ ಕುಡಿದಂತೆ, ಮರುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ ವಿರಸಂ, ಮುತ್ತುಂ ಮೆಣಸುಂ ಕೋದಂತೆ. ಶ್ರೇಷ್ಠ ಜನಪರ ಧೋರಣೆಯ ಕವಿಯಾದ ಶ್ರೀ ವಿಜಯನ ಚಂದ್ರ ಪ್ರಭ ಪುರಾಣ ಒಂದು ಉತ್ಕೃಷ್ಟ ಕಾವ್ಯವಾಗಿದ್ದಿರಬೇಕೆಂದು ಕವಿರಾಜ ಮಾರ್ಗದಿಂದ ಗ್ರಹಿಸಬಹುದು.

ಜಿನಸೇನಾಚಾರ್ಯರು ಜೈನ ದಿಗಂಬರ ಮುನಿಪರಂಪರೆಯಲ್ಲಿ ಪ್ರಾತಃ ಸ್ಮರಣೀಯರು. ಅವರಿಗೆ ಆಚಾರ್ಯ ವೀರಸೇನರು ವಿದ್ಯಾಗುರುವಾಗಿ, ಆಚಾರ್ಯ ಜಯಸೇನರು ದೀಕ್ಷಾಗುರುಗಳಾಗಿ ದೊರೆತರು. ರಾಷ್ಟ್ರಕೂಟ ಚಕ್ರವರ್ತಿ ಅಮೋಘ ವರ್ಷ ನೃಪತುಂಗನೂ ಆಚಾರ್ಯ ಗುಣಭದ್ರರೂ ಶಿಷ್ಯರಾಗಿ ದೊರೆತರು. ಅಲ್ಲದೆ ಆಚಾರ್ಯ ದಶರಥರೂ, ಆಚಾರ್ಯ ವಿಜಯಸೇನರೂ ಸಹಪಾಠಿಗಳಾಗಿ ದೊರೆತದ್ದು ಜಿನಸೇನಾಚಾರ್ಯರ ಭಾಗ್ಯ ವಿಶೇಷ. ಒಂದೇ ಶತಮಾನದಲ್ಲಿ (ಕ್ರಿ.ಶ. 9 ನೆಯ ಶ.) ಇಬ್ಬರು ಜಿನಸೇನಾಚಾರ್ಯರಿದ್ದುದು ಮತ್ತೊಂದು ಗಮನಾರ್ಹ ವಿಷಯ. ಒಬ್ಬರು ಮಹಾಪುರಾಣ ಖ್ಯಾತಿಯ ಜಿನಸೇನರು, ಇನ್ನೊಬ್ಬರು ಪುನ್ನಾಟ ಸಂಘದ ಜಿನಸೇನಾಚಾರ್ಯರು—ಇವರು ಸಂಸ್ಕೃತದಲ್ಲಿ ಹರಿವಂಶ ಪುರಾಣ ವೆಂಬ ಮಹಾಕಾವ್ಯವನ್ನು ಬರೆದಿದ್ದಾರೆ ; ಅದರ ಆಧಾರದಿಂದಲೇ ಕನ್ನಡದಲ್ಲಿ ಮೊದಲನೆಯ ಗುಣವರ್ಮನು ಹರಿವಂಶವೆಂಬ ಆಗಮ ಕಾವ್ಯವನ್ನು ರಚಿಸಿದ್ದು. ಪ್ರಸ್ತುತ ಜಿನಸೇನಾಚಾರ್ಯರು ಸೇನ ಸಂಘದವರಾಗಿದ್ದರು.

ಆಚಾರ್ಯ ಜಿನಸೇನರು ಜೈನಾಗಮಗಳಲ್ಲಿ ಅದ್ವಿತೀಯ ಜ್ಞಾನಿಗಳಾಗಿದ್ದರು. ಅವರು ವಿದ್ವತ್ತಿನೊಂದಿಗೆ ಕವಿತ್ವ ಶಕ್ತಿಯನ್ನೂ ಗಳಿಸಿದ್ದರು. ಸಂಸ್ಕೃತ, ಪ್ರಾಕೃತ (ಮತ್ತು ಕನ್ನಡ) ಭಾಷೆಗಳಲ್ಲಿ ಸಮದಂಡಿಯಾದ ಪಾಂಡಿತ್ಯ ಪಡೆದಿದ್ದರು. ಅವರು ಕನ್ನಡದಲ್ಲಿ ಬರೆಯಲಿಲ್ಲವಾದರೂ ಕನ್ನಡ ಜೈನಪುರಾಣ ಸಾಹಿತ್ಯಕ್ಕೆ ಬೇಕಾದ ಮಾತೃಕೆಯನ್ನು ಕೊಟ್ಟರು. ಗುರುಗಳಾದ ಆಚಾರ್ಯ ವೀರಸೇನರು ಬರೆಯಲಾರಂಭಿಸಿದ ಜಯಧವಲ ಹೆಸರಿನ ಕಷಾಯ ಪ್ರಾಭೃತ ಗ್ರಂಥದ 20,000 ಶ್ಲೋಕಗಳು ಮುಗಿಯುವುದರಲ್ಲಿ ದೇವಲೋಕಕ್ಕೆ ಸಂದಾನ್. ಅದರಿಂದ ಜಯ ಧವಲದ ಉಳಿದ 40,000 ಶ್ಲೋಕಗಳನ್ನು (ಪ್ರಾಕೃತದಲ್ಲಿ) ಕ್ರಿ.ಶ. 837 ರಲ್ಲಿ ಬರೆದು ಮುಗಿಸಿದವರು ಜಿನಸೇನರು. ಈ ಜಯಧವಲ ಕೃತಿ ರಚನೆಗೆ ತಕ್ಕ ಆಶ್ರಯ ನೀಡಿದ್ದರಿಂದ ನೃಪತುಂಗನಿಗೆ 'ಅತಿಶಯಧವಲ' ಎಂಬ ಪ್ರಶಸ್ತಿ ಉಂಟಾಯಿತು.

ಜಿನಸೇನರು ಪಾರ್ಶ್ವಾಭ್ಯುದಯ, ಜಿನಗಣಸ್ತುತಿ, ವರ್ಧಮಾನ ಪುರಾಣ, ಮೊದಲಾದ ಕೃತಿಗಳನ್ನು ರಚಿಸಿದ್ದಾರೆ. 334 ಮಂದಾ ಕ್ರಾಂತ ವೃತ್ತ ಪದ್ಯಗಳಿರುವ ಪಾರ್ಶ್ವಾಭ್ಯುದಯ ಒಂದು ಸಮಸ್ಯಾಪೂರ್ಣ ಖಂಡ ಕಾವ್ಯವಾಗಿದ್ದು ಕಾಳಿದಾಸನ ಮೇಘದೂತದ ಮಾದರಿಯಲ್ಲಿದೆ. ಮೇಘ ಸಂದೇಶದ ಒಂದು ಅಥವಾ ಎರಡು ಪಾದಗಳನ್ನು ಎತ್ತಿಕೊಂಡು ಅವುಗಳಿಗೆ ಸ್ವಯಂ ರಚನೆಯ ಪಾದಗಳನ್ನು ಸೇರಿಸಿ ಶೃಂಗಾರ ರಸವಾಹಿನಿಯ ಬದಲು ವೈರಾಗ್ಯ ಭಾವ ತುಂಬಿ ಈ ಪಾರ್ಶ್ವನಾಥ ಚರಿತೆಯನ್ನು ರಚಿಸಲಾಗಿದೆ. ಮೇಘಸಂದೇಶದ ವೃತ್ತ ಪದ್ಯಗಳ ಕಡೆಯ ಪಾದಗಳನ್ನು ತೆಗೆದುಕೊಂಡು ಸ್ವತಂತ್ರ ಕಾವ್ಯ ರಚಿಸಿರುವ ನಿದರ್ಶನಗಳಿವೆ ; ಆದರೆ ಅದರ ಎಲ್ಲ ಶ್ಲೋಕಗಳನ್ನು ಅಳವಡಿಸಿಕೊಂಡು ಶೃಂಗಾರಕ್ಕೆ ತದ್ವಿರುದ್ಧವಾದ ರಸಭಾವ ಪೋಷಕವೂ ಸ್ವತಂತ್ರವೂ ಆದ ಕಾವ್ಯ ರಚಿಸಿರುವ ಮಹತ್ಕವಿ ಜಿನಸೇನಾ ಚಾರ್ಯರೊಬ್ಬರೇ.

ಜಿನಸೇನರ ಹೆಸರು ಕನ್ನಡ ಸಾಹಿತ್ಯದ ಸಂಬಂಧದಲ್ಲಿ ಮತ್ತೆ ಮತ್ತೆ ಪ್ರಸ್ತಾಪಿತ ವಾಗುವುದು ಅವನ ಇನ್ನೊಂದು ಮೇರುಕೃತಿಯಾದ 'ಆದಿಪುರಾಣ'ದಿಂದ. ಸಂಸ್ಕೃತ ದಲ್ಲಿ ಮಹಾಪುರಾಣವನ್ನು 77 ಪರ್ವಗಳು ಮತ್ತು 20 ಸಾವಿರ ಶ್ಲೋಕ ಪ್ರಮಾಣ ದಲ್ಲಿ ಬರೆಯಲು ಆರಂಭಿಸಿದರು. ಪ್ರಥಮಾನುಯೋಗ, ಚರಣಾನುಯೋಗ, ಕರಣಾನು ಯೋಗ, ದ್ರವ್ಯಾನುಯೋಗ ಇವು ಜೈನ ಶ್ರುತ ಸ್ಕಂದ ಅಥವಾ ಅನುಯೋಗ ಚತುಷ್ಟಯ, ಅಥವಾ ಜೈನರ 4 ವೇದಗಳು. ಪ್ರಥಮಾನುಯೋಗದಲ್ಲಿ ತ್ರಿಷಷ್ಟಿ ಶಲಾಕಾಪುರುಷರ ಚರಿತೆಯಿದೆ. ಈ ಪ್ರಥಮಾನುಯೋಗದ ಆಧಾರದ ಮೇಲೆ ಶ್ರೀನಂದಿ, ಕವಿಪರಮೇಷ್ಠಿ, ಕೂಚಿಭಟ್ಟಾರಕ ಮೊದಲಾದವರು ಮಹಾ ಪುರಾಣಗಳನ್ನು ಬರೆದಿದ್ದರು. ಅವೆಲ್ಲವನ್ನೂ, 'ಮುನ್ನಿನ ಮಹಾ ಪುರಾಣಂಗಳು ಯೆಲ್ಲಮಂ ಇಕ್ಕಿ ಮೆಟ್ಟಿದುದೈ' ಜಿನಸೇನ ಗುಣಭದ್ರ ಆಚಾರ್ಯ ದ್ವಯ ವಿರಚಿತ ಮಹಾ ಪುರಾಣಂ. ಇದರಲ್ಲಿ ಮೊದಲನೆಯ ಭಾಗ (ಪೂರ್ವಾರ್ಧ) ಪೂರ್ವ ಪುರಾಣ, ಎರಡನೆಯ ಭಾಗ (ಉತ್ತರಾರ್ಧ) ಉತ್ತರ ಪುರಾಣ ; ಪೂರ್ವ ಪುರಾಣವು ಆದಿಪುರಾಣವೆಂದು ಪ್ರಸಿದ್ಧಿಯಾಗಿದ್ದರೂ ಕನ್ನಡಿಗರು ಮಾತ್ರ ಪಂಪನ ಆದಿಪುರಾಣದ ಹೆಸರಿನೊಂದಿಗೆ ಗೊಂದಲವಾಗದಿರಲು ಪೂರ್ವ ಪುರಾಣವೆಂದೇ ಕರೆದಿದ್ದಾರೆ. ಪೂರ್ವಪುರಾಣದ 42 ಪರ್ವಗಳಲ್ಲಿ 10,380 ಶ್ಲೋಕಗಳನ್ನು ರಚಿಸಿ ಜನಸೇನಾ ಚಾರ್ಯರು ಸ್ವರ್ಗಾಗ್ರಮಾನ್ ಏರಿದಾರ್ ! ಆಗ ಅವರ ಪರಮ–ಸಮರ್ಥ ಶಿಷ್ಯ ವರೇಣ್ಯರಾದ ಆಚಾರ್ಯ ಗುಣಭದ್ರರು ಶೇಷ ಭಾಗವನ್ನು ಅಚ್ಚುಕಟ್ಟಾಗಿ ಬರೆದು ಪೂರೈಸಿದರು. ತಮ್ಮ ಗುರುಗಳಾದ ವೀರಸೇನರು ನಿಲ್ಲಿಸಿದ್ದ ಜಯಧವಲವನ್ನು ಜಿನಸೇನರೂ, ತಮ್ಮ ಗುರುಗಳು ಈ ಜಿನಸೇನರು ನಿಲ್ಲಿಸಿದ್ದ ಮಹಾಪುರಾಣವನ್ನು ಗುಣಭದ್ರರೂ ಪೂರೈಸಿ ಗುರಿ ಮುಟ್ಟಿಸಿ ಶಿಷ್ಯತ್ವಕ್ಕೆ ಸಾರ್ಥಕತೆ ತಂದರು.

ಆಚಾರ್ಯ ಗುಣಭದ್ರದೇವನನ್ನು ತ್ರೈವಿದ್ಯನೆಂದೂ, ಗಣಧರನೆಂದೂ ಸರಸ್ವತಿ ಮತ್ತು ಬ್ರಹ್ಮನೊಂದಿಗೆ ಶಿಕ್ಷಣ ಪಡೆದನೆಂದೂ ಕೀರ್ತಿಸಲಾಗಿದೆ. ಗುಣಭದ್ರರು ಸಂಸ್ಕೃತದಲ್ಲಿ ಆತ್ಮಾನುಶಾಸನವೆಂಬ ನೀತಿಕಾವ್ಯ ಸಂಕಲನವನ್ನೂ ಜಿನದತ್ತ ಚರಿತೆ ಎಂಬ ಕೃತಿಯನ್ನೂ ಸಿದ್ಧಪಡಿಸಿದ್ದಾರೆ, ಗುರುವಿಗೆ ತಕ್ಕ ಶಿಷ್ಯರೆನಿಸಿದ ಗುಣಭದ್ರರು ಪೂರ್ವ ಪುರಾಣದಲ್ಲಿ 1620 ಪದ್ಯಗಳನ್ನೂ, ಉತ್ತರ ಪುರಾಣದಲ್ಲಿ 8000 ಪದ್ಯಗಳನ್ನೂ ಹೀಗೆ ಒಟ್ಟು 9620 ಶ್ಲೋಕಗಳನ್ನು ರಚಿಸಿ ಮಹಾಪುರಾಣವನ್ನು ಈಗಿನ ಬಂಕಾಪುರದ (ತ್ರಿಷಷ್ಟಿ) 63 ಕಂಬದ ಶಾಂತೀಶ್ವರ ಬಸದಿಯಲ್ಲಿ ಬರೆದು ಕ್ರಿ.ಶ. 898 ರಲ್ಲಿ ಪೂರೈಸಿದರು. ಬಂಕಾಪುರದಲ್ಲಿ ಆಗ ರಾಷ್ಟ್ರಕೂಟರ ಪರವಾಗಿ ರಾಜ್ಯಪಾಲನಾಗಿದ್ದವನು ವೀರ ಬಂಕರಸನ ಮಗ ಲೋಕಾದಿತ್ಯ. ಗುಣಭದ್ರಾಚಾರ್ಯರು ನೃಪತುಂಗನ ಮಗನಾದ ಇಮ್ಮಡಿ ಕೃಷ್ಣನಿಗೆ ರಾಜಗುರುವಾಗಿದ್ದರು.

ಭಾರತೀಯ ಸಾಹಿತ್ಯದಲ್ಲಿ ರಾಮಾಯಣ, ಮಹಾಭಾರತ, ಗುಣಾಢ್ಯನ ಬೃಹತ್ಕಥಾ ಮತ್ತು ಜಿನಸೇನ ಗುಣಭದ್ರರ ಮಹಾಪುರಾಣ-ಇವು ನಾಲ್ಕು ಅದ್ವಿತೀಯ ಮಹಾಕಾವ್ಯಗಳು, ಸಾಮಾಜಿಕ, ಸಾಂಸ್ಕೃತಿಕ, ಚಾರಿತ್ರಿಕ, ತಾತ್ವಿಕ ಸಂಗತಿಗಳನ್ನು ಗರ್ಭೀಕರಿಸುವ ಮಹಾಪುರಾಣವು ಭಾರತೀಯ ವಿಚಾರಧಾರೆಗೆ ಹೈದರಾಬಾದು ಕರ್ನಾಟಕದ್ದಷ್ಟೇ ಅಲ್ಲದೆ ಇಡೀ ಕರ್ನಾಟಕದ ಮಹತ್ವದ ಚಿರಂತನ ಕೊಡುಗೆ.

ಈ ಮಹಾಪುರಾಣಸಾರವನ್ನು ಸಂಸ್ಕೃತದಿಂದ ಕನ್ನಡಕ್ಕೆ ಮೊಟ್ಟಮೊದಲಿಗೆ ಇಳಿಸಿಕೊಟ್ಟವನು ಶ್ರವಣಬೆಳಗೊಳದಲ್ಲಿ ಬಾಹುಬಲಿ ಗೊಮ್ಮಟ ಮೂರ್ತಿ (ವಿಶ್ವ ವಿಖ್ಯಾತ 58 ಅಡಿ ಮೂರ್ತಿ)ಯನ್ನು ಮಾಡಿಸಿದ ಗುಣರತ್ನ ಭೂಷಣನಾದ ಚಾವುಂಡರಾಯ, ಕ್ರಿ.ಶ. 978 ರಲ್ಲಿ.

> ಕವಿ ಪರಮೇಶ್ವರರ್ ಬರೆದುದಂ ಜಿನಸೇನ ಮಹಾಮುನೀಶರಿ ಯವನಿಗೆ ಪೇಳ್ದುಮಾಣೆ ಗುಣ ಭದ್ರ ಮುನೀಶ್ವರರೆಯ್ದೆ ಪೇಳ್ದುಪ ಲ್ಲವಿಸಿದುದಂ ತ್ರಿಷಷ್ಟಿ ಪುರುಷ ಪ್ರತಿಬದ್ಧ ಪುರಾಣಮಂ ಮಹೋತ್ಸವದೊಳೆ ಭವ್ಯಕೋಟಿಗಜ್ಞಿಯಲ್ ಒರೆದಂ ಗುಣರತ್ನ ಭೂಷಣಂ.

ಈ ಗುಣಭದ್ರಾಚಾರ್ಯರು ಆದಿ ಗುಣವರ್ಮನ ಕನ್ನಡ ಹರಿವಂಶವನ್ನು ತಿದ್ದಿಕೊಟ್ಟವರೆಂಬ ಹೊಸ ಸಂಗತಿಯೊಂದನ್ನು ಡಾ. ಹಂಪ. ನಾಗರಾಜಯ್ಯ ಹೇಳಿದ್ದಾರೆಂಬ ಅಂಶವನ್ನೂ ಇಲ್ಲಿ ಸ್ಮರಿಸಬಹುದಾಗಿದೆ.

ಶ್ರೀ ವಿಜಯನಂಥ ಕವಿಗೆ ಆಶ್ರಯ ಕೊಟ್ಟ ಚಕ್ರವರ್ತಿ-ಅಮೋಘವರ್ಷ ನೃಪತುಂಗನು (815-878) ರಾಷ್ಟ್ರಕೂಟ ಸಾಮ್ರಾಜ್ಯಕ್ಕೆ ರಾಷ್ಟ್ರೀಯ ಖ್ಯಾತಿ ತಂದು ಕೊಟ್ಟನು. ನೃಪತುಂಗನು ಅಜೈನ ಮತಧರ್ಮಗಳನ್ನು ಸಹ ಗೌರವಿಸಿ ತನ್ನ ಅನೇಕಾಂತ ದೃಷ್ಟಿಯನ್ನೂ ರಾಜಧರ್ಮವನ್ನೂ ಪ್ರಕಟಿಸಿದನು. ಇವನ ಹಿರಿಯ

ನಾಗಿದ್ದ ಹಿಂದಿನ ಜಗತ್ತುಂಗ ರಾಜನು ಜೈನ ಆಚಾರ್ಯ ವೀರಸೇನನ ಶಿಷ್ಯನಾಗಿದ್ದನು. ನೃಪತುಂಗನು ಅಚಾರ್ಯದ್ವಯ ವೀರಸೇನರಿಗೂ ಮತ್ತು ಅವರ ಶಿಷ್ಯರಾದ ಜಿನ ಸೇನರಿಗೂ ಶಿಷ್ಯನಾಗಿದ್ದನು. ಜೈನ ಧಾರ್ಮಿಕ ಮೂಲ ಆಗಮಕೃತಿ 'ಧವಲಾ'ದ ರಚನೆಗೆ ಆಸರೆಯಾಗಿ ನಿಂತು 'ಅತಿಶಯಧವಲ'ನೆನಿಸಿದನು. ತನ್ನ ರಾಜಗುರುವಾದ ಜಿನಸೇನರನ್ನು ನೃಪತುಂಗನು ಎಷ್ಟು ಪೂಜ್ಯ ಭಾವದಿಂದ ಕಾಣುತ್ತಿದ್ದನೆಂಬುದನ್ನು ಗುಣಭದ್ರಾಚಾರ್ಯರು ದಾಖಲಿಸಿದ್ದಾರೆ.

ಯಸ್ಯಪ್ರಾಂಸುನಖಾಂಶುಜಾಲ ವಿಸರತ್ ಧಾರಾಂತರಾವಿರ್ಭವತ್
ಪದಾಂಭೋಜರಜಃ ಪಿಶಂಗ ಮುಕುಟ ಪ್ರತ್ಯಗ್ರ ರತ್ನದ್ಯುತಿಃ ।
ಸಂಸ್ಮರ್ತಾ ಸ್ವಮಮೋಘವರ್ಷ ನೃಪತಿಃ ಪೂತೋಽಹಮದ್ಯೇತ್ಯಲಂ
ಸ ಶ್ರೀಮಾನ್ ಜಿನಸೇನ ಪೂಜ್ಯ ಭಗವತ್ಪಾದೋ ಜಗನ್ಮಂಗಲಮ್ ॥

[ಜಿನಸೇನ ಭಗವತ್ಪಾದರ ಪಾದಧೂಳಿಯನ್ನು ತನ್ನ ತಲೆ ತಗಿಸುವ ಕಿರೀಟ-
ದೆಡೆಯಲ್ಲಿ ತಳೆದು ಅದರ ರತ್ನ ಕಾಂತಿ ಗುರುವಿನ ಕಿರಣಗಳ ಧಾರಾಂತರ್ಗತ
ವಾದ ಧೂಳಿಯಿಂದ ಕೆಂಪೇರುತ್ತಿರಲು ನಾನಿಂದು ಪುನೀತನಾದೆ ಎಂದು-
ಅಮೋಘ ವರ್ಷ ನೃಪತಿಯು ನೆನೆಯುತ್ತಿದ್ದನು].

ನೃಪತುಂಗನ ಬಲಗೈ ಬಂಟನಾಗಿ ಬಾಳಿಸುದ್ದಕ್ಕೂ ಕಷ್ಟ ಸುಖಗಳಲ್ಲಿ ನೆರವಾದ ವನು ಮಹಾದಂಡನಾಯಕನೂ ನಿಷ್ಠಾವಂತ ಜೈನನೂ ಆದ-ಚೆಲ್ಲಕೇತನ ವಂಶದ ಬಂಕರಸನು ; ನೃಪತುಂಗನ ರಾಜಗುರುಗಳು ವೀರಸೇನ ಜಿನಸೇನರು ; ಆಸ್ಥಾನ ಕವಿ ಗಳು ಜೈನರಾದ ಗಣಿತಜ್ಞ ಮಹಾವೀರಾಚಾರ್ಯ, ವೈಯಾಕರಣಿ ಜೈನ ಶಾಕಟಾಯನ ಮತ್ತು ಶ್ರೀ ವಿಜಯ. ಶಾಕಟಾಯನನು ತನ್ನ ಸೂತ್ರಗಳ ವೃತಿಗೆ ಜೈನರಾಜನ ನೆನಪಿನಿಂದ 'ಅಮೋಘ ವೃತ್ತಿ'ಯೆಂದು ಕರೆದಿದ್ದಾನೆ ; ಅನದ್ಯತನ ಭೂತಕಾಲಕ್ಕೆ ಉದಾಹರಣೆಯಾಗಿ ಅದಹದಮೋಘವರ್ಷೋ ಅರಾತೀನ್' [iv. 3-207]. ನೃಪ ತುಂಗನು ಸಂಸ್ಕೃತದಲ್ಲಿ ಪ್ರಶ್ನೋತ್ತರ ರತ್ನಮಾಲಾ ಎಂಬ ಕೃತಿ ರಚಿಸಿದ್ದಾನೆ, ಅದರಲ್ಲಿ ನೃಪತುಂಗನು 62 ವರ್ಷಗಳ ದೀರ್ಘಕಾಲ ರಾಜ್ಯವಾಳಿ ಕಡೆಗೆ ವೈರಾಗ್ಯದಿಂದ ರಾಜ್ಯ ತ್ಯಾಗ ಮಾಡಿ ಜೈನ ಸನ್ಯಾಸಿಯಾದನೆಂಬ ಸೂಚನೆಯಿದೆ :

ವಿವೇಕಾತ್ ತ್ಯಕ್ತ ರಾಜ್ಯೇನ ರಾಜ್ಞೇಯಂ ಸದಲಂ ಕೃತಿಃ
ರಚಿತಾಮೋಘ ವರ್ಷೇಣ ಸುಧಿಯಾ ಸದಲಂ ಕೃತಿಃ

ಇದಕ್ಕೆ ಬರೆದಿರುವ ಒಬ್ಬ ಜೈನ ಲೇಖಕನ ವ್ಯಾಖ್ಯೆ ; 'ವಿವೇಕ ದತ್ತಣಿಂದ ತೊರೆಯ ಲ್ಪಟ್ಟ ರಾಜ್ಯವನ್ನುಳ್ಳಂಥ ಅಮೋಘವರ್ಷನೆಂಬ ಅರಸನಿಂದ ಈ ರತ್ನಮಾಲೆ ವಿದ್ವಜ್ಜನಂಗಳಿಗೆ ಒಳ್ಳಿತಪ್ಪ ಅಲಂಕಾರದೊಡನೆ ಕೊಡಲ್ಪಟ್ಟುದಾಗಿ ಮಾಡಲ್ಪಟ್ಟಿತು. [ಬಿ. ಬಿ. ಮಹಿಪವಾಡಿ 1977 ; 150] ನೃಪತುಂಗನ ಆಸ್ಥಾನದ ಕವಿಯಾದ

ಮಹಾವೀರಾಚಾರ್ಯನೂ ಕೂಡ "ನೃಪತುಂಗನು" ಜೈನೇತರರ ಏಕಾತ್ಮವಾದವನ್ನು ಧ್ವಂಸ ಮಾಡಿ ಜೈನರ ಅನೇಕಾಂತವಾದವನ್ನು ಅಂಗೀಕರಿಸಿರುವನು" ಎಂದು ಸ್ಪಷ್ಟ ಪಡಿಸಿದ್ದಾನೆ.

ಇತಿಹಾಸಕಾರ ಡಾ. ಬಾ. ರಾ. ಗೋಪಾಲರೂ, ವಿದ್ವಾಂಸ ಡಾ. ಕೆ. ಕೃಷ್ಣ ಮೂರ್ತಿಯವರೂ ನೃಪತುಂಗನು ಜಿನಧರ್ಮಾವಲಂಬಿಯಾಗಿದ್ದನೆಂಬುದನ್ನು ಒಪ್ಪಿದ್ದಾರೆ : "ಎಲ್ಲ ಪ್ರಾಮಾಣಿಕ ವಚನಗಳನ್ನು ತೆರೆದ ಮನಸ್ಸಿನಿಂದ ಅನುಶೀಲಿಸುವವರಿಗೆ ನೃಪತುಂಗ ಚಕ್ರವರ್ತಿಯು ಜೈನಧರ್ಮದಲ್ಲಿ ವಿಶೇಷ ಶ್ರದ್ಧಾವಂತನಾಗಿದ್ದನೆಂಬ ವಿಷಯದಲ್ಲಿ ಸಂಶಯವೇನೂ ಉಳಿಯಲಾರದು". [ಡಾ. ಕೆ. ಕೃಷ್ಣಮೂರ್ತಿ : ಕವಿರಾಜಮಾರ್ಗಂ 1983 ; 44]

ನೃಪತುಂಗನ ಆಸ್ಥಾನ ಕವಿಯಾದ ಮಹಾವೀರಾಚಾರ್ಯನು ಗಣಿತಸಾರ ಸಂಗ್ರಹ (ಉಪಲಬ್ಧ), ಜ್ಯೋತಿಷ ಪಟಲ (ಅನುಪಲಬ್ಧ) ಮುಂತಾದ ಕೃತಿಗಳ ಕರ್ತೃ. ಆರ್ಯಭಟ (ಕ್ರಿ. ಶ. 476) ಬ್ರಹ್ಮ ಗುಪ್ತ (ಕ್ರಿ. ಶ. 628) ತರುವಾಯ ಆಗಿಹೋದ ಗಣಿತಶಾಸ್ತ್ರಜ್ಞರಲ್ಲಿ ಮಹಾವೀರಾಚಾರ್ಯನು (ಕ್ರಿ. ಶ. 870) ಪ್ರಸಿದ್ಧನು. ಗಣಿತದ ಮಹತ್ವವನ್ನು ಕುರಿತು ಈತನ ಉವಾಚ :

> ಲಾಕಿಕೇ ವೈದಿಕೇ ಸಾಮಾಯಿಕೇsಪಿಯಃ
> ವ್ಯಾಪಾರಸ್ತತ್ರ ಸರ್ವತ್ರ ಸಂಖ್ಯಾನಮುಪಯುಜ್ಯತೇ ॥
> ಕಾಮತಂತ್ರೇ ಅರ್ಥಶಾಸ್ತ್ರೇಚ ; ಸರ್ವೇಷು ಪ್ರಸ್ತುತಂ ಗಣಿತಂ ಪರಂ ।
> ಬಹುಭಿರ್ವಿ ಪ್ರಲಾಪೈಃ ಕಿಂ ತ್ರೈಲೋಕ್ಯೇ ಸಚರಾಚರೇ
> ಯತ್ಕಿಂಚಿದ್ವಸ್ತು ತತ್ಸರ್ವಂ ಗಣಿತೇನ ವಿನಾನಹಿ ॥

[ಸಾಂಸಾರಿಕ ವೈದಿಕ ಜೈನ ಧಾರ್ಮಿಕ ಮೊದಲಾದ ಕಾರ್ಯಗಳಲ್ಲೂ, ಕಾಮತಂತ್ರ ಅರ್ಥಶಾಸ್ತ್ರಗಳಲ್ಲೂ ಗಣಿತವು ಶ್ರೇಷ್ಠವಾದುದು : ಹೆಚ್ಚು ಪ್ರಲಾಪದಿಂದೇನು ? ಮೂರು ಲೋಕದಲ್ಲಿರುವ ಚರಾಚರ ವಸ್ತುಗಳೆಲ್ಲವೂ ಗಣಿತದಿಂದ ಬೇರ್ಪಟ್ಟಿಲ್ಲ] ಜೈನ ಪರಂಪರೆಯಲ್ಲಿ ಉಮಾಸ್ವಾಮಿಯ ತತ್ವಾರ್ಥಾಧಿಗಮ ಸೂತ್ರ (ಕ್ರಿ. ಶ. 1ನೆಯ ಶ.) ಸ್ಥಾನಾಂಗ ಸೂತ್ರ (ಕ್ರಿ. ಪೂ. 3 ಶ.) ಅನುಯೋಗ ದ್ವಾರ ಸೂತ್ರ (ಕ್ರಿ. ಪೂ. 1 ಶ.), ಚಂದ್ರ ಪ್ರಜ್ಞಪ್ತಿ, ಜಂಬೂ ದ್ವೀಪ ಪ್ರಜ್ಞಪ್ತಿ, ಸೂರ್ಯ ಪ್ರಜ್ಞಪ್ತಿ–ಮುಂತಾದ ಸಂಸ್ಕೃತ ಪ್ರಾಕೃತ ಗ್ರಂಥಗಳಲ್ಲಿ ಜೈನರ ಗಣಿತಜ್ಞಾನದ ನಿದರ್ಶನಗಳಿವೆ. ಒಂದನೆಯ ಭಾಸ್ಕರನು (ಕ್ರಿ.ಶ. 522) ತಾನು ರಚಿಸಿರುವ ಆರ್ಯಭಟೀಯ ವ್ಯಾಖ್ಯಾನ ಗ್ರಂಥದಲ್ಲಿ ಜೈನರು ಗಣಿತ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಗೌರವಿಸಿ ಜೈನರ ಪ್ರಾಕೃತ ಗ್ರಂಥಗಳಿಂದ ಮೂರು ಗಾಥೆಗಳನ್ನು ಸಹ ಉದಾಹರಿಸಿದ್ದಾನೆ. ಜೈನ ಲೇಖಕರಲ್ಲಿ ಗಣಿತ ಶಾಸ್ತ್ರ ವಿಶಾರದನಾಗಿ ವಿಜೃಂಭಿಸಿ ಭಾರತೀಯರಲ್ಲೇ ಮಹತ್ವದ

ಗಣಿತ ಜ್ಞಾನಿಯೆಂದು ಮಾನ್ಯನಾದವನು ಮಹಾವೀರಾಚಾರ್ಯ (ಕ್ರಿ.ಶ. 870). ಈತನು ತನ್ನ ಗಣಿತ ಸಾರ ಸಂಗ್ರಹದಲ್ಲಿ ನೃಪತುಂಗನನ್ನು ಜೈನತ್ವದ ರಾಜನೆಂದು ಸ್ಪಷ್ಟಪಡಿಸಿದ್ದಾನೆ :

> ವಿಧ್ವಸ್ತೈಕಾಂತ ಪಕ್ಷಸ್ಯ ಸ್ಯಾದ್ವಾದ ನ್ಯಾಯವಾದಿನಃ
> ದೇವಸ್ಯ ನೃಪತುಂಗಸ್ಯ ವರ್ಧತಾಂ ತಸ್ಯ ಶಾಸನಮ್ ॥

ನೃಪತುಂಗನ ತರುವಾಯ ಸುಮಾರು 80 ವರ್ಷಗಳ ವರೆಗಿನ ಕನ್ನಡ ಕೃತಿಗಳು ಕಾಲನ ಗರ್ಭ ಸೇರಿರುವುದರಿಂದ ನಮ್ಮವರೆಗೆ ಉಳಿದುಬಂದಿಲ್ಲ. ಇಮ್ಮಡಿ ನಾಗ ವರ್ಮನು ಹೆಸರಿಸಿರುವ ಕವಿಗಳೂ ಕೃತಿಗಳೂ ಈ ಅವಧಿಗೆ ಸೇರಿದುವೆಂದೇ ತೋರು ತ್ತದೆ. ಹೀಗಾಗಿ ಹತ್ತನೆಯ ಶತಮಾನದ ಮಹಾಕವಿಗಳನ್ನೇ ನಾವು ಕಾಣುವುದು ಕವಿರತ್ನನ ವಾಣಿ

> ಕವಿಜನದೊಳ್ ರತ್ನತ್ರಯ
> ಪವಿತ್ರರೆನೆ ನೆಗಱ್ದ ಪಂಪನುಂ ಪೊನ್ನಿಗನುಂ
> ಕವಿ ರತ್ನನುಮೀ ಮೂವರ್
> ಕವಿಗಳ್ ಜಿನಸಮಯ ದೀಪಕರ್ ಪೆಱರೊಳರೇ ॥
>
> ಧರಣಿಗೆ ನೆಗೞ್ದರ್ ಸಲೆ ರ
> ಟ್ಟ ರಾಜ್ಯದೊಳ್ ಮುನ್ನೆ ಪಂಪನುಂ ಪೊನ್ನಿಗನುಂ
> ನರಪತಿ ಪೂಜ್ಯಂ ಚಾಳೂ
> ಕ್ಯ ರಾಜ್ಯದೊಳ್ ನೆಗೞ್ದನುಭಯ ಕವಿರತ್ನಂ ॥

10ನೆಯ ಶತಮಾನದ ಘನತೆ, ವ್ಯಾಪ್ತಿ, ಸತ್ವ ಪಡೆದುಕೊಳ್ಳಲು ಸಾಧ್ಯವಾದದ್ದು ಪಂಪ ಪೊನ್ನ ರನ್ನರಿಂದ. ಪಂಪ ಪೊನ್ನ ರನ್ನರು ರತ್ನತ್ರಯರು, ಜಿನಸಮಯ ದೀಪಕರು. ಇವರು ಮೂವರೂ ಹೈದರಾಬಾದು ಕರ್ನಾಟಕದವರು, ರಟ್ಟರಾಜ್ಯ ಪಟ್ಟದ ಕವಿಗಳಾಗಿ ಪಂಪ-ಪೊನ್ನರೂ ಚಾಲುಕ್ಯ ರಾಜ್ಯದ ಜೀವಧ್ವನಿಯಾಗಿ ರನ್ನನೂ ವಿಖ್ಯಾತರು. ಈ ಕವಿಗಳ ವಿಚಾರವಾಗಿ ವಿಸ್ತಾರವಾದ ವಿಮರ್ಶನ ಸಾಹಿತ್ಯ ರಾಶಿಯಿದೆ. ಆದರಿಂದ ಕೆಲವೇ ವಾಕ್ಯಗಳಲ್ಲಿ ಪರಿಚಯಿಸಬಹುದಾಗಿದೆ. ಪಂಪ ವೆಂಗಿ ನಾಡಿನವನು, ಬೆಳ್ವೊಲದ ಅಣ್ಣಿಗೇರಿಯ ಮಗುವಾಗಿ ಬೆಳೆದವನು. ರಾಷ್ಟ್ರ ಕೂಟರ ಸಾಮಂತರಾದ ವೇಮುಲವಾಡ ಚಾಲುಕ್ಯರ ಆಸರೆಯಲ್ಲಿ ಅರಳಿದ ಈ ಕಾವ್ಯ ಪ್ರತಿಭೆಯು ಅರಿಕೇಸರಿಯೊಂದಿಗೆ ಮಾನ್ಯಖೇಟಕ್ಕೆ ಆಗಾಗ ಬಂದು ಹೋಗಿರುವ ಸಾಧ್ಯತೆಯು ಉತ್ಪ್ರೇಕ್ಷೆಯಾಗಲಿ ಊಹೆಯಾಗಲಿ ಆಗಿರದೆ ವಾಸ್ತವವೇ ಆಗಿದೆ. ಆದಿಗುಣವರ್ಮನಿಂದ ಆರಂಭವಾದ, ಬಹುಶಃ ಅದಕ್ಕೂ ಹಿಂದಿನಿಂದ ಪ್ರಾರಂಭವಾದ ಕಾವ್ಯಪದ್ಧತಿ ಎಂದರೆ ಸಮಕಾಲೀನ ಚರಿತ್ರೆಯನ್ನು ಪುರಾಣಕಾವ್ಯದೊಂದಿಗೆ ಬೆಸೆಯು ವುದು : ಇದು ಜೈನ ಕವಿಗಳು ತಮ್ಮ ಆಶ್ರಯದಾತರಿಗೆ ತೋರಿದ ಗೌರವ, ಇವನ್ನು

ಪಂಪ ಪೊನ್ನ ರನ್ನರೂ ಮುಂದುವರೆಸಿದರು. ಈ ಕವಿಗಳು ತಮ್ಮ ಧರ್ಮದ ನಿಷ್ಠೆಯಿಂದ ಧಾರ್ಮಿಕ ಕೃತಿಗಳನ್ನೂ, ಸಮಾಜದ ಅಪೇಕ್ಷೆಯಂತೆ, ಆಶ್ರಯ ಕೊಟ್ಟವರ ಕೋರಿಕೆಯಂತೆ ಲೌಕಿಕ ಕಾವ್ಯಗಳನ್ನೂ ರಚಿಸಿದ್ದಾರೆ. ಪಂಪನ ವಿಕ್ರಮಾರ್ಜುನ ವಿಜಯ ಮತ್ತು ಆದಿಪುರಾಣ ಕನ್ನಡ ಸಾಹಿತ್ಯ ಹೃದಯದ ಎರಡು ಶ್ವಾಸಕೋಶಗಳು. ಪಂಪನದು ಸಮನ್ವಯದ ಮನೋಧರ್ಮ. ಭೋಗ ಯೋಗಗಳ ಸಮನ್ವಯಗುಣ ಪಂಪನಲ್ಲಿ ಅಂಕುರಿಸಿ ರತ್ನಾಕರವರ್ಣಿಯಲ್ಲಿ ಪಲ್ಲವಿಸಿದೆ. ಹಾಗೆಯೇ ಧರ್ಮ ಮತ್ತು ಕಾವ್ಯಧರ್ಮ ಒಂದು ಸಮಪಾಕದಲ್ಲಿ ಹದವಾಗಿ ಮಿಳಿತವಾಗಿದೆ. ಯುಗದ ಕವಿ ಎಂಬ ಲಕ್ಷಣಕ್ಕೆ ಹೇಳಿ ಮಾಡಿಸಿದ ಲಕ್ಷ್ಯವಾಗಿರುವ ಪಂಪನು ತರುವಾಯದ ಕವಿಗಳಿಗೆ ಅನುಕರಣಯೋಗ್ಯ ಕಾವ್ಯ ಮಾದರಿಯನ್ನು ನಿರ್ಮಿಸಿದನು. ತನ್ನ ನಾಡಿನ ನೆಲದ ಹಾಡು ಪಂಪನ ಹೃದಯ ಗೀತೆಯೂ ಆಗಿ ಪದ್ಯ ತರಂಗಗಳು ಕನ್ನಡ ಕಾವ್ಯ ಮಂಡಲದಲ್ಲಿ ಇಂದಿಗೂ ಅನುಕರಣಿತವಾಗುತ್ತಿವೆ. ಹೂ ಹಣ್ಣುಗಳಿಂದ ಕೂಡಿದ ಅಲ್ಲಿನ ಕಾಡು ಸೊಕ್ಕಿದ ಆನೆಗಳನ್ನೂ, ದೇವಮಾತೃಕವೆನಿಸಿದ ಹೊಲ ಗಂಧಶಾಳಿ ಭತ್ತವನ್ನು ಬೆಳೆಯುವ ಮಣ್ಣು ಕರುನಾಡಿನದು ; ಅದು ಮಾವು ಮಲ್ಲಿಗೆಗಳ ತವರು. ಇನ್ನು ಸಂಸಾರ ಸಾರ ಸರ್ವಸ್ವ ಫಲ ಪೆರತು ಅವುದು ಎಂಬುದು ಪಂಪನೊಂದಿಗೆ ಕನ್ನಡ ಜನಮನದ ಮಾತೂ ಆಗುತ್ತದೆ. ವ್ಯಾಸ ಮುನೀಂದ್ರ, ರುಂದ್ರ, ವಚನಾಮೃತ ವಾರ್ಧಿಯನ್ನೂ, ಜಿನಸೇನ ವಿರಚಿತ ಆದಿತೀರ್ಥ ತೀರವನ್ನೂ, ಈಸಿ ದಡ ಸೇರಿದ ಪಂಪಕವಿ ಕನ್ನಡಕ್ಕೆ ಎರಡು ಮಹಾಕಾವ್ಯಗಳನ್ನು ನೀಡಿದ್ದು ಅಪೂರ್ವ ಸಾಧನೆ. ಅದರಿಂದಾಗಿ ಪಂಪನು ಪಸರಿಪ ಕನ್ನಡಕ್ಕೆ ಒರ್ವನೆ ಒಡೆಯನಾಗಿ, ನಾಡೋಜನಾಗಿ ನಿಂತಿದ್ದಾನೆ.

ಪೊನ್ನನು ಪ್ರಥಮ ದರ್ಜೆಯ ಕವಿ, ಕನ್ನಡದ ಸತ್ವಶಾಲಿ ಮತ್ತು ಮಹತ್ವದ ಕವಿಗಳಲ್ಲೊಬ್ಬ. ಅವನ 'ಭುವನೈಕ ರಾಮಾಭ್ಯುದಯ' ಕಾವ್ಯ ಅನುಪಲಬ್ಧವಾದರೂ ಶಾಂತಿಪುರಾಣವು ಉಪಲಬ್ಧವಾಗಿದೆ. ಕುರುಳ್ಗಳ ಸವಣನಾದ ಪೊನ್ನನು, ತನಗಿಂತಲೂ ಮೊದಲು ಅಸಗನು ಸಂಸ್ಕೃತದಲ್ಲಿ ರಚಿಸಿದ ಶಾಂತಿಪುರಾಣದ ಆಧಾರದಿಂದ. ಕನ್ನಡ ಶಾಂತಿ ಪುರಾಣವನ್ನು ರಚಿಸಿದ್ದಾನೆ. ಇದಕ್ಕೆ ಪ್ರೇರಕರು ದಾನ ಚಿಂತಾಮಣಿ ಅತ್ತಿಮಬ್ಬೆಯ ತಂದೆ ಮಲ್ಲಪಯ್ಯ ಮತ್ತು ಚಿಕ್ಕಪ್ಪ-ಪೊನ್ನಮಯ್ಯ. ಅಸಗನ ಸಂಸ್ಕೃತ ಕಾವ್ಯವನ್ನು ಕನ್ನಡಿಸುವಾಗ ಪೊನ್ನಕವಿ ಭಾಷಾಂತರ ಸಮಸ್ಯೆಯೊಂದಿಗೆ ಸೃಜನಾತ್ಮಕ ಸವಾಲುಗಳನ್ನು ನಿರ್ವಹಿಸಿದ ರೀತಿ ಗಮನಾರ್ಹವಾಗುತ್ತದೆ. ಸಂಸ್ಕೃತ ಕಾವ್ಯಪದ್ಧತಿಗಿಂತ ಕನ್ನಡ ಕಾವ್ಯಪದ್ಧತಿ ಭಿನ್ನ. ಈ ಭಿನ್ನತೆಯಲ್ಲಿ ಪೊನ್ನನ ಕಾವ್ಯಶಕ್ತಿ ಮಿಂಚಿದೆ. ಅಂದರೆ ಅಸಗ ಪೊನ್ನರಲ್ಲಿ ಸಾದ್ಯಂತವಾಗಿ ಇರುವುದು ಸಮಾನ ವಸ್ತುವೇ ಆದರೂ ಅದರ ನಿರ್ವಹಣೆಯಲ್ಲಿ, ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳಿಗೆ ಕಾರಣ ಇಬ್ಬರು ಕವಿಗಳ ಮನೋಧರ್ಮ. ಭೌಗೋಳಿಕ ಹಿನ್ನೆಲೆ, ಸಾಹಿತ್ಯಕ ಪರಿಸರ,

ಕೃತಿರಚನೆಯ ಜರೂರು–ಇಂಥ ಕಾಳಜಿಗಳಲ್ಲಿರುವ ಅಂತರ. ಇದರಿಂದಾಗಿಯೇ ಅಸಗನ ಪ್ರಭಾವವನ್ನು ಜೀರ್ಣಿಸಿಕೊಳ್ಳುವುದು ಪೊನ್ನನಿಗೆ ಸಾಧ್ಯವಾಯಿತು. ಕನ್ನಡದಲ್ಲಿ ಪೊನ್ನಕವಿ ಕಾವ್ಯ ರಚಿಸುವ ವೇಳೆಗಾಗಲೇ, ಸಮಕಾಲೀನ ಆಶ್ರಯದಾತರನ್ನು ಕಾವ್ಯದ ಪ್ರಧಾನಪಾತ್ರಗಳೊಂದಿಗೆ ತಗುಳ್ಚಿ ಹೇಳುವ ಸಂಪ್ರದಾಯವೊಂದು ರೂಢಿಗೆ ಬಂದಿತ್ತು. ಇತಿಹಾಸವೂ ಹಾಸೂಹೊಕ್ಕಾಗಿ ಸೇರುತ್ತಿತ್ತು. ಮೂಲ ಅಸಗನಲ್ಲಿ ಈ ರೀತಿಯ ಸೇರ್ಪಡೆಗಳಿಲ್ಲ, ಪೊನ್ನನಲ್ಲಿದೆ. ಅಸಗನಿಗಿಂತ ಪೃಥಕ್ ನೆಲೆಯಲ್ಲಿ ಪೊನ್ನನ ಕಾವ್ಯ ಚಲಿಸಲು ಸಾಂದರ್ಭಿಕ ಪ್ರೇರಣೆಗಳೂ ಪರಿಕಲ್ಪನೆಗಳೂ ಹುರಿಗೊಂಡು ಹೇಗೆ ನಿಯಂತ್ರಿಸಿ ನಡೆಸಿವೆ ಎಂಬುದನ್ನು ಮನಗಾಣಬೇಕು. ಜೊತೆಗೆ ಅಸಗನ ಕಾವ್ಯದ ಪಾತ್ರಗಳಿಗೆ ಪೊನ್ನ ಹೊಸ ಜೀವಕಳೆಯನ್ನು ಹೇಗೆ ತಂದಿದ್ದಾನೆಂಬುದರ ಪರಿಶೀಲನೆಯೂ ಅಭ್ಯಾಸಯೋಗ್ಯ. ಐತಿಹಾಸಿಕ ಧ್ವನಿಯಿರುವ ಪಾತ್ರಗಳ ವ್ಯಕ್ತಿತ್ವ ಪೊನ್ನನಲ್ಲಿ ಕಳೆಯೇರಿದೆ. ಇವೆಲ್ಲದರ ಪರಿಣಾಮವಾಗಿ ಶಾಂತಿಪುರಾಣದ ಕಥಾವಸ್ತು ಸಂಸ್ಕೃತದಿಂದ ಕನ್ನಡಕ್ಕೆ ಶುಷ್ಕವಾದ ಪರಿವರ್ತನವಾಗದೆ ಮರುಹುಟ್ಟು ಪಡೆದಿದೆ; ಈ ನೆಲದ, ಜನದ, ದೇಸಿಯ ಬಗಿ ಬನಿಗಳನ್ನು ಮೈಗೂಡಿಸಿ ಮೊನಚುಗೊಂಡಿದೆ. ಅದರಲ್ಲಿ ಕನ್ನಡ ಜನಾಂಗದ ಮೌಲ್ಯಗಳು ಮೂರ್ತೀಭವಿಸಿವೆ.

ಕಥಾನಾಯಕ ಇಬ್ಬರ ಕಾವ್ಯಗಳಲ್ಲೂ ಸಮಾನವೇ. ಆದರೆ ಪೊನ್ನ ಕವಿ ಹೊಸಲು ಬೆಳಕನ್ನು ಹಾಯಿಸಿರುವುದು ಭವಾವಳಿಯ ಭಾಗಗಳಲ್ಲಿ, ಕಾವ್ಯದ ಪೂರ್ವಾರ್ಧದಲ್ಲಿ ಕನ್ನಡ ಶಾಂತಿ ಪುರಾಣ ಕಾವ್ಯದ ಪ್ರಾರಂಭದ ಎರಡು ಆಶ್ವಾಸಗಳು ಇಡೀ ಕಾವ್ಯದ ಶ್ವಾಸಗಳು. ಸ್ವತಂತ್ರಾನುವಾದದ ರೀತಿಗೆ ಪಂಪ ಆಗಲೇ ಹೆದ್ದಾರಿ ಹಾಕಿದ್ದ. ಪೊನ್ನ ಹಿಡಿದದ್ದೂ ಅದೇ ಹಾದಿ. ಹೀಗೆ ಹೊಸ ಹಾದಿಯಲ್ಲಿ ಹೆಜ್ಜೆ ಹಾಕಿದ್ದರಿಂದಾಗಿ ಪೊನ್ನನ ಕಾವ್ಯ ಅಭಿನವ ಸೃಷ್ಟಿಯಾಯಿತು, ಅಭಿಜಾತತೆ ಪಡೆಯಿತು. ಅಸಗನಿಂದ ಕಡ ಪಡೆದು ತಂದ ತಾಮ್ರದ ತಂತಿಗೆ ಪೊನ್ನ ತನ್ನ ಸ್ವಪ್ರತಿಭೆ ಮತ್ತು ವಿದ್ವತ್ತಿನ ವಿದ್ಯುತ್ತನ್ನು ಹರಿಸಿ ಉಜ್ವಲಪರವಾಗಿ ಪ್ರಜ್ವಲಿಸುವಂತೆ ಮಾಡಿದ್ದಾನೆ. [ಹಂಪ ನಾಗರಾಜಯ್ಯ: 1982: 157–160]

ಉಭಯಕವಿ ರನ್ನನು ಹುಟ್ಟಿದ್ದು ಜಂಬುಖಂಡಿ. ಎಪ್ಪತ್ತರ ಮುದುಪ್ರೌಳಲಲ್ಲಾದರೂ ಆತನು ಕಾವ್ಯರಚಿಸಿ ಖ್ಯಾತನಾಮನಾದದ್ದು ಚಾಲುಕ್ಯರ ರಾಜಧಾನಿ ಮಳಖೇಡದಲ್ಲಿ. ಇಮ್ಮಡಿ ತೈಲಪ ಚಕ್ರವರ್ತಿಯು ರನ್ನನಿಗೆ ಕವಿಚಕ್ರವರ್ತಿಯೆಂಬ ಪ್ರಶಸ್ತಿ ಕೊಟ್ಟಿದ್ದು ಮಾನ್ಯಖೇಟಪುರದಲ್ಲಿ. ರನ್ನನು ಮೂರು ಮೆಟ್ಟಿಲೇರಿ ಮುಂದೆ ಬಂದವನು. ತನ್ನ ಹುಟ್ಟೂರಿನ ಹತ್ತಿರದಲ್ಲೇ ಆಳುತ್ತಿದ್ದ ಸಾಮಂತರಾದ ರಟ್ಟುಕುಲ ಭೂಷಣ ಒಂದನೆಯ ಕಾರ್ತವೀರ್ಯ (ಕತ್ತಭೂಪ)ನಲ್ಲಿ ಸೇರಿ ಇನಿಸುಉದಿತೋದಿತನಾದನು: ಅಲ್ಲಿಂದ, ಸ್ವತಂತ್ರ ರಾಜರ ಸ್ಥಾನಮಾನಸಹಿತ ಮಹಾಮಂಡಲೇಶ್ವರನಾಗಿ (ರಾಷ್ಟ್ರಕೂಟರ ಆಧೀನದಲ್ಲಿ) ಆಳುತ್ತಿದ್ದ ಗಂಗರಲ್ಲಿ ಸೇರಿ ಅಭ್ಯುದಯಪರನೆನಿಸಿ

ದನು ; ಅಲ್ಲಿಂದ ಚಾಲುಕ್ಯ ಚಕ್ರವರ್ತಿಗಳಲ್ಲಿ ಸೇರಿ ಉದಯ ಪರಂಪರೆಯನ್ನು ಎಯ್ದಿದವನು ಕವಿ ರನ್ನ. ಕವಿ ರನ್ನನ ಭಾಗ್ಯದ ಬಾಗಿಲು ತೆರೆದವರು ದಾನಚಿಂತಾಮಣಿ ಅತ್ತಿಮಬ್ಬೆ ಮತ್ತು ಸಮರಧುರಂದರ ಚಾವುಂಡರಾಯ. ಮುಖ್ಯವಾಗಿ ರನ್ನನ ಅದೃಷ್ಟದ ಕವಾಟೋದ್ಘಾಟನೆಯಾದದ್ದು ಅತ್ತಿಮಬ್ಬೆಯ ತಾರುಣ್ಯದ ಕಾಕಿಣೀ ರತ್ನದಿಂದ. ಚಾವುಂಡರಾಯನು ಶ್ರವಣಬೆಳಗೊಳದಲ್ಲಿ ಉನ್ನತ ಕುಕ್ಕುಟೇಶ್ವರ ಗೊಮ್ಮಟ ಜಿನನ ಸಾಕ್ಷಿಯಾಗಿ ರನ್ನನನ್ನು ಅತ್ತಿಮಬ್ಬೆಗೆ ಪರಿಚಯಿಸಿದ್ದು ಅಮೃತ ಗಳಿಗೆಯಲ್ಲಿ. ಅಂದಿನಿಂದ ಅತ್ತಿಮಬ್ಬೆ ರನ್ನನನ್ನು ತನ್ನ ಎರಡನೆಯ ಮಗನಾಗಿ ದತ್ತು ಸ್ವೀಕರಿಸಿದಳು. ರನ್ನನೂ ಆಕೆಯನ್ನು ಕಾವ್ಯದಂತದಲ್ಲಿ ಸೂಕ್ಷ್ಮರೇಖಾ ವಿನ್ಯಾಸ ಗಳೊಂದಿಗೆ ಬರೆದು ಮೂಡಿಸಿದ. ಅಜಿತ ಪುರಾಣದ ರಚನೆಯಾದದ್ದು ಕ್ರಿ.ಶ. 993ರ ಅಕ್ಟೋಬರ್-ನವಂಬರ್ ತಿಂಗಳಲ್ಲಿ. ಈ ಹಂತದಲ್ಲಿ ರನ್ನನನ್ನು ಅತ್ತಿಮಬ್ಬೆ ಚಾಲುಕ್ಯ ಚಕ್ರವರ್ತಿಗೆ ಪರಿಚಯಿಸಿ ಆಸ್ಥಾನ ಕವಿಯಾಗಿಸಿದಳು ; ತೈಲಪನು ರನ್ನನನ್ನು ಕವಿ ಚಕ್ರವರ್ತಿಯಾಗಿ ಬೆಳೆಸಿದನು. ರನ್ನನಿಂದ ಅತ್ತ ಚಾವುಂಡರಾಯನೂ, ಇತ್ತ ಅತ್ತಿಮಬ್ಬೆಯೂ ಉತ್ತ ತೈಲಪ-ಇರಿವ ಬೆಡಂಗರೂ ಚಿರಸ್ಥಾಯಿಗಳಾದರು; ರನ್ನನೂ ತನ್ನ ಮಕ್ಕಳಿಗೆ (ಚಾವುಂಡ) ರಾಯ-ಅತ್ತಿಮಬ್ಬೆ ಎಂದು ಹೆಸರಿಟ್ಟದ್ದಂತೂ ಕೃತಜ್ಞತೆ ಮರುಹುಟ್ಟು ಪಡೆದಂತೆ (ಇನ್ನಿಬ್ಬರು ಮಕ್ಕಳು ಹುಟ್ಟಿದ್ದರೆ ತೈಲಪ ಇರಿವಬೆಡಂಗ ಎಂದು ನಾಮಕರಣ ಮಾಡುತ್ತಿದ್ದ) ಪಂಪನಂತೆ ಕವಿಯಾಗಿದ್ದ ರನ್ನನು ಇರಿವಬೆಡಂಗ ಸತ್ಯಾಶ್ರಯನ ಸೇನಾಪತಿಯೂ ಆಗಿದ್ದನು; ಅಲ್ಲದೆ, ರನ್ನನು ಶಾಸನ ಕವಿಯೂ ಆಗಿದ್ದನು. ರನ್ನನು ಬರೆದ ಲಕ್ಕುಂಡಿಯ ಶಾಸನ ಕನ್ನಡ ಶಾಸನ ಪ್ರಪಂಚದಲ್ಲಿ ಅನರ್ಘ್ಯ ರತ್ನವಾಗಿದೆ [SII, XI-i.52.1007, p. 39-43].

ರನ್ನನು ಅಜಿತ ಪುರಾಣ ಚಿತ್ರಕ್ಕೆ ಅತ್ತಿಮಬ್ಬೆಯ ಸುವರ್ಣ ಚೌಕಟನ್ನು, ಕಟ್ಟಿದ್ದಾನೆ ; ಆ ಕಾವ್ಯದ ತೀರ್ಥಂಕರ ಚರಿತೆಯನ್ನು ಕೆಳಕ್ಕೆಹಾಕಿ ಅತ್ತಿಮಬ್ಬೆಯ ಚರಿತ್ರೆಮೇಲೆ ನಿಲ್ಲುತ್ತದೆ. ಕರ್ನಾಟಕದ ಶ್ರೇಷ್ಠ ಸಾಧ್ವಿ ಮತ್ತು ಸ್ತ್ರೀರತ್ನವೆಂದರೆ' ಅತ್ತಿಮಬ್ಬೆಯೇ ಎಂಬುದನ್ನು ಅನ್ಯಾದೃಶ ರೀತಿಯಲ್ಲಿ ಸ್ಥಾಪಿಸಿದ್ದಾನೆ, ಅತ್ತಿಮಬ್ಬೆಯನ್ನು ಕುರಿತು ರಚಿಸಿರುವ ಒಂದೊಂದು ಪದ್ಯವೂ ಆತನ ಕವಿಚಕ್ರವರ್ತಿ ಬಿರುದನ್ನು ಸಾರ್ಥಕ ಪಡಿಸಿದೆ. ಅತ್ತಿಮಬ್ಬೆಯನ್ನು ಕುರಿತು ರನ್ನನ್ನು ಬರೆದಿರುವ ಪದ್ಯಗಳನ್ನು ಉದಾಹರಿಸುವವರೆಲ್ಲ ನಿರಂತರವಾಗಿ ಮರೆತಿರುವ, ಆದರೆ ಅತ್ಯಂತ ಐತಿಹಾಸಿಕ ಮಹತ್ವವಿರುವ ಅಪರೂಪದ ಒಂದು ವೃತ್ತ ಪದ್ಯವನ್ನು ನಾನಿಲ್ಲಿ ಉದಾಹರಿಸುತ್ತೇನೆ.

> ಪಿರಿಯಂ ಬೂತಗನಾತನಿಂ ಮಮುಳನಾತಂಗಂ ನೊಳಂಬಾಂತಕಂ
> ಪಿರಿಯಂ ನೆಟ್ಟನೆ ದಾನ ಧರ್ಮದೆಡೆಯೊಳ್ ಚಾವುಂಡರಾಯಂ ಕರಂ
> ಪಿರಿಯಂ ಶಂಕರಗಂಡನೆಲ್ಲೆ, ಪಿರಿಯಂ ತದ್ದ್ವಾರವಂ ಪೊತ್ತುನಿ
> ತ್ತರಿಸುತ್ತಿರ್ಪುದಱಿಂದೆ ನೀನೆ ಪಿರಿಯೈ ಶ್ರೀದಾನಚಿಂತಾಮಣೀ ॥

ಇದರಲ್ಲಿರುವ ವ್ಯಕ್ತಿಗಳ ಸಂಬಂಧವಾಗಿ ಸಿಗುವ ಶಾಸನಗಳ ಮಾಹಿತಿಯನ್ನು ಕುರಿತು ವಿವೇಚಿಸಿದರೆ ಅದೇ ಒಂದು ಮೌಲಿಕವಾದ ಮಹಾ ಪ್ರಬಂಧವಾಗುತ್ತದೆ. ಇನ್ನು ರನ್ನನ ಸಾಹಸಭೀಮ ವಿಜಯ ಕಾವ್ಯದ ವೈಭವವಂತೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೊಳಗುತ್ತಲೇ ಇದೆ.

ರಾಷ್ಟ್ರಕೂಟರ ಚಕ್ರವರ್ತಿ ಮುಮ್ಮಡಿ ಕೃಷ್ಣನ ಸಚಿವನೂ ದಂಡಾಧಿಪತಿಯೂ ಆದ ಭರತನು ಉದಾರಿ, ಸದ್ಗುಣಿ, ಜಿನಭಕ್ತ. ಇವನನ್ನು ಪ್ರಾಕೃತ ಮಹಾಕವಿ ಪುಷ್ಪದಂತನೂ ಕನ್ನಡದ ಕವಿ ಬ್ರಹ್ಮ ಶಿವನೂ (ಸಮಯಪರೀಕ್ಷೆ 1–43) ಈತನ ಗುಣಾತಿಶಯಗಳನ್ನು ಶ್ಲಾಘಿಸಿದ್ದಾರೆ. ಈ ಭರತನು ಅಜರಾಮರ ನಾಗಿರುವುದು ಪ್ರಾಕೃತ ಮಹಾಕವಿಯಾದ ಪುಷ್ಪದಂತನಿಗೆ ಆಶ್ರಯ ಕೊಟ್ಟಿದ್ದರಿಂದ. ಭರತನು ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಟದಲ್ಲಿ ದೊಡ್ಡ ಅಧಿಕಾರಿಯಾಗಿದ್ದುದಲ್ಲದೆ, ಸಾಹಿತ್ಯ ಪ್ರೇಮಿಯಾಗಿದ್ದನು. ಮಾನ್ಯ ಖೇಟದ ತನ್ನ ಮನೆಯಲ್ಲಿ ಪುಷ್ಪದಂತನಿಗೆ ಆಶ್ರಯ ಕೊಟ್ಟನು ಆತನ ಉತ್ತೇಜನದಿಂದ ಸ್ಫೂರ್ತಿಗೊಂಡು ಪುಷ್ಪದಂತನು ಕ್ರಿ. ಶ. 959 ರಲ್ಲಿ ಪ್ರಾರಂಭಿಸಿ 'ತಿಸಟ್ಠಿ ಮಹಾ ಪುರಿಸ ಗುಣಾಲಂಕಾರು' (ತ್ರಿಷಷ್ಟಿ ಮಹಾಪುರುಷ ಗುಣಾಲಂಕಾರ)ಎಂಬ ಮಹಾ ಪುರಾಣವನ್ನು ಅಪಭ್ರಂಶ ಪ್ರಾಕೃತದಲ್ಲಿ ಕ್ರಿ.ಶ. 965ರಲ್ಲಿ ಪೂರೈಸಿದನು, ದುರ್ದೈವದಿಂದ ಭರತನು ನಿಧನನಾದುದಲ್ಲದೆ ಮಾನ್ಯಖೇಟವನ್ನು ಕ್ರಿ.ಶ. 971 ರಲ್ಲಿ ಮಾಳವದ ಪರಮಾರಸೀಯಕ ಶ್ರೀ ಹರ್ಷನು ಸುಟ್ಟು ಲೂಟಿ ಮಾಡಿದನು. ರಾಷ್ಟ್ರಕೂಟರ ಕೊಟ್ಟಿಗ, ಕರ್ಕ ಮತ್ತು ಇಂದ್ರ - ಈ ಮೂವರೂ ಸೋತು ಗತಿಸಿದರು. ಇಂಥ ಹತಾಶ ಸ್ಥಿತಿಯಲ್ಲಿ ಭರತನ ಮಗನಾದ ನನ್ನನು ಪುಷ್ಪದಂತನಿಗೆ ಆಶ್ರಯವನ್ನು ಮುಂದುವರಿಸಿದನು. ರನ್ನನನ್ನು ತಂದೆ ಮಕ್ಕಳಾದ ತೈಲಪ-ಇರಿವಬೆಡಂಗರು - ಕಾಪಾಡಿದಂತೆ ಪುಷ್ಪದಂತನನ್ನು ತಂದೆ ಮಕ್ಕಳಾದ ಭರತ-ನನ್ನರು ಪ್ರೋತ್ಸಾಹಿಸಿದರು. ನನ್ನನು ತಂದೆಗೆ ತಕ್ಕಮಗ, ನನ್ನನ ನೆರವಿನಿಂದ ಪುಷ್ಪದಂತನು ಜಸಹರಚರಿಉ (ಯಶೋಧರ ಚರಿತೆ) ಮತ್ತು ಣಾಯಕುಮಾರ ಚರಿಉ (ನಾಗಕುಮಾರ ಚರಿತೆ) ಎಂಬ ಇನ್ನೆರಡು ಕಾವ್ಯಗಳನ್ನು ರಚಿಸಿ ಅಪಭ್ರಂಶ ಸಾಹಿತ್ಯಕ್ಕೆ ಕಾಂತಿಯನ್ನು ಹೆಚ್ಚಿಸಿದನು, "ಪುಷ್ಪದಂತನು (ನಾಗಕುಮಾರನ) ಈ ಜಟಿಲ ಕಥಾನಕವನ್ನು ನಾನಾವರ್ಣನೆ, ವಿವಿಧ ಛಂದ ಪ್ರಯೋಗ, ರಸ ಮತ್ತು ಭಾವಗಳ ಚಿತ್ರಣ ಸಹಿತ ಅತ್ಯಂತ ರೋಚಕವಾಗುವಂತೆ ಮಾಡಿ ನಿರೂಪಿಸಿದ್ದಾನೆ : [ಹೀರಾಲಾಲ ಜೈನ್ ; 1971 : 201].

Karnataka has been a Cradle and an abode for fondling and nursing prakrit in the hours of distress and crisis. To cite an example, when Mahakavi pushpadanta had lost all hopes in life, and Could not make both ends meet, it was the fortune of

Karnataka to give him the timely shelter and honour. But for the patronise of Nanna and Bharata, true sons of the soil of Karnataka, prakrit Literature would not have seen immortal classics like Mahapurana, Jasahara Cariu and Nayakumara Cariu' [Dr. Hampa Nagarajaiah; 1990 : 3]

ರಾಷ್ಟ್ರಕೂಟರ ಸಾಮಂತರಾದ ವೇಮುಲವಾಡ ಚಾಲುಕ್ಯರ ಕಾಲದಲ್ಲಿ ಪಂಪನ ತರುವಾಯ ಸೋಮದೇವ ಸೂರಿಯು ಸುಪ್ರಸಿದ್ಧವೂ ಸಾಂಸ್ಕೃತಿಕ ಮಹತ್ವದ್ದೂ ಆದ ಯಶಸ್ತಿಲಕ ಚಂಪು ಕಾವ್ಯವನ್ನು ಕ್ರಿ. ಶ, 959 ರಲ್ಲಿ ರಚಿಸಿದನು. ಈ ಕಾವ್ಯದ ಕಡೆಯ ಮೂರು ಅಧ್ಯಾಯಗಳು 'ಉಪಾಸಕಾಧ್ಯಯನ' ಎಂಬ ಹೆಸರಿನಿಂದ ಸ್ವತಂತ್ರ ಕೃತಿ ಎಂಬಂತೆ ಮಾನ್ಯತೆ ಪಡೆದಿದೆ. ಈ ಸೋಮದೇವನು ರಾಯಚೂರು ಜಿಲ್ಲೆಯ ಗಂಗಾವತಿಯವನಿರಬೇಕೆಂಬ ಸೂಚನೆ ಸರಿಯಲ್ಲ. ಈತನು ಪಂಪನ ತಮ್ಮನಾದ ಜಿನವಲ್ಲಭನ ಶಾಸನ ದೊರೆತ ಸ್ಥಳಕ್ಕೆ ಸಮೀಪದಲ್ಲಿರುವ ಗಂಗಾಧರಂ ಎಂಬಲ್ಲಿಗೆ ಸೇರಿದವನು ; ಜಿನವಲ್ಲಭನೂ ಸೋಮದೇವನೂ ಸಮಕಾಲೀನರು ಮತ್ತು ಸ್ನೇಹಿತರು.

ಪಶ್ಚಿಮದ ಚಾಲುಕ್ಯರು ಕಲ್ಯಾಣದ ಚಾಲುಕ್ಯರೆಂದು ಖ್ಯಾತರಾಗಿದ್ದಾರೆ. ಕ್ರಿ. ಶ. 973 ರಿಂದ ಸು. 200 ವರ್ಷ ಇವರ ಸಾಮ್ರಾಜ್ಯ ಬೆಳಗಿತು. ಇವರ ಪ್ರಾರಂಭದ ರಾಜಧಾನಿ ಮಾನ್ಯಖೇಟವೇ ; 1050 ರಿಂದ ಕಲ್ಯಾಣ ರಾಜಧಾನಿಯಾಗಿತ್ತು. ಇವರ ಆಶ್ರಯದಲ್ಲಿ ನಾಗವರ್ಮ, ಶ್ರೀಧರಾಚಾರ್ಯ, ಶಾಂತಿ ನಾಥ, ನಾಗಚಂದ್ರ, ನಯಸೇನ, ಬ್ರಹ್ಮಶಿವ, ಅಗ್ಗಳ-ಮೊದಲಾದ ಜೈನ ಕವಿಗಳು ಮೇಲ್ಮಟ್ಟದ ಕಾವ್ಯಗಳನ್ನು ರಚಿಸಿ ಕನ್ನಡ ಸಾಹಿತ್ಯ ಭಂಡಾರವನ್ನು ಸಂಪನ್ನಗೊಳಿಸಿ ದ್ದಾರೆ. ಕಲ್ಯಾಣವು ಸಹ ಬೀದರ್ ಜಿಲ್ಲೆಗೆ ಸೇರಿದ್ದು ಹೈಕ'ದ ವ್ಯಾಪ್ತಿಗೆ ಬರುವುದ ರಿಂದ ಈ ಎಲ್ಲ ಕವಿಗಳ ಕಾವ್ಯಗಳನ್ನೂ ಪ್ರಸ್ತುತ ಸಂಪ್ರಬಂಧದ ಚೌಕಟ್ಟಿಗೆ ಸೇರಿಸಿಯೇ ಸಾಹಿತ್ಯ ಸಂವಾದವನ್ನು ಮುಂದುವರಿಸಬೇಕಾದ ಔಚಿತ್ಯವಿದೆ.

ಇಲ್ಲಿಯೇ ಹೇಳಬೇಕಾದ ಇನ್ನೂ ಒಂದು ಹೊಸ ಮಾತಿದೆ. ಇದುವರೆಗೆ ಚರಿತ್ರಕಾರರು ಕೀರ್ತಿವರ್ಮ ಎಂಬುವನು ಗೋವೈದ್ಯವೆಂಬ ಕಾವ್ಯ ಬರೆದಿದ್ದರೂ ಆತನು ಚಾಲುಕ್ಯ ಚಕ್ರವರ್ತಿ ತ್ರೈಲೋಕ್ಯ ಮಲ್ಲನ ಮಗನಾಗಲಿ ಆರನೆಯ ವಿಕ್ರಮಾದಿತ್ಯನ ಸೋದರನಾಗಲಿ ಅಲ್ಲವೆಂದು ವಾದಿಸುತ್ತ ಬಂದಿದ್ದಾರೆ. ಕನ್ನಡ ಸಂಶೋಧಕರಂತೂ ಈತನ ವಿಚಾರವಾಗಿ ಬ್ರಹ್ಮಶಿವ ಕವಿ ಸಮಯಪರೀಕ್ಷೆಯಲ್ಲಿ ಹೇಳಿರುವುದಕ್ಕಿಂತ ಅಥವಾ ಸ್ವತಃ ಕವಿಯೇ ಗೋವೈದ್ಯದ ಒಂದು ಪದ್ಯದಲ್ಲಿ ತಿಳಿಸಿರುವುದಕ್ಕಿಂತ ಹೆಚ್ಚಿಗೆ ಏನೇನೂ ಗೊತ್ತಿಲ್ಲವೆಂದಿದ್ದಾರೆ. ಆದರೆ ಇತ್ತೀಚೆಗೆ ಡಾ॥ ಹಂಪ. ನಾಗರಾಜಯ್ಯ ತಮ್ಮ ಸಂಶೋಧನೆಯಿಂದ 14 ಶಿಲಾಶಾಸನಗಳನ್ನು

ಪತ್ತೆಹಚ್ಚಿ ಈ ಕೀರ್ತಿವರ್ಮನು ಚಾಲುಕ್ಯ ರಾಜಕುಮಾರನೆಂಬುದನ್ನು ಸದೃಢವಾಗಿ ಪ್ರತಿಪಾದಿಸಿದ್ದಾರೆ. ಇದರಿಂದಾಗಿ ಒಬ್ಬ ರಾಜಕುಮಾರನೂ ಕೂಡ ಹೈಕ'ದ ಜೈನ ಸಾಹಿತ್ಯವನ್ನು ಪುಷ್ಟಿಗೊಳಿಸಿದವರ ಸಾಲಿಗೆ ಸೇರಿದಂತಾಗಿದೆ.

ಈ ಲೇಖನದ ಸಮಾರೋಪದ ಘಟ್ಟಕ್ಕೆ ನಾವೀಗ ತಲುಪಿರುವುದರಿಂದ ಸಾರಾಂಶ ರೂಪದಲ್ಲಿ ಮಂಡಿಸಬೇಕಾದ ಮಾತುಗಳನ್ನು ಕ್ರೋಡೀಕರಿಸಿ ಹೇಳಬಹುದು. ಹೈಕ'ದ ಜೈನ ಸಾಹಿತ್ಯ ಎರಡು ಹಂತಗಳಲ್ಲಿ ಕಾಣುತ್ತದೆ. ಒಂದು, ಕ್ರಿ.ಶ. 10ನೆಯ ಶ. ದ. ವರೆಗೆ ಮಾನ್ಯಖೇಟದಲ್ಲಿ ; ಎರಡು ಕ್ರಿ. ಶ. 10 ರಿಂದ 12ನೆಯ ಶ. ದ. ವರೆಗೆ ಚಾಳುಕ್ಯರ ಆಶ್ರಯಲ್ಲಿ. ರಾಷ್ಟ್ರಕೂಟರಿಗೆ ರಾಜಧಾನಿಯಾಗಿದ್ದುದು ಮಾನ್ಯ ಖೇಟ (ಮಳಖೇಡ, ಮಾಲ್‌ಖೇಡ್, ಮಳಯುಖೇಡ): ಅದು ಕರ್ನಾಟಕದ ಪುರಾತನ ನಗರಗಳಲ್ಲೊಂದು. ಅಲ್ಲಿ ಅನೇಕ ಜೈನ ಬಸದಿಗಳೂ ಜೈನ ಮಠಗಳೂ, ಜೈನ ಗುರುಕುಲ-ವಿದ್ಯಾ ಕೇಂದ್ರಗಳೂ ಇದ್ದುವು. ಕಳ್ವಪ್ಪು (ಶ್ರವಣಬೆಳ್ಗೊಳ) ಕೊಪಣಾಚಲ (ಕೊಪ್ಪಳ) ಕೋಗಳಿ, ಪುನ್ನಾಟ (ಪುನ್ನಾಡು-ಹದಿನಾಡು) ಪುಲಿಗೆರೆ (ಲಕ್ಷ್ಮೇಶ್ವರ), ಪಲಾಶಿಕೆ (ಹಲಸಿ) ಬನವಾಸಿ-ಇವು, ಕರ್ನಾಟಕದಲಿಯೇ ಏಕೆ ಇಡೀ ದಕ್ಷಿಣ ಭಾರತ ದಲ್ಲಿಯೇ ಪ್ರಾಚೀನ ಜೈನ ಕೇಂದ್ರಗಳು. ಮಳಖೇಡವು ಕ್ರಿ.ಶ. 1 ರಿಂದ 10ನೆಯ ಶ.ದ ವರೆಗೆ ನಿರಂತರವಾಗಿ ಜೈನ ಕೇಂದ್ರ. ಉತ್ತರದಿಂದ ಪ್ರಸಿದ್ಧ ಜೈನಗುರು ಪಾದಲಿಪ್ತಾ ಚಾರ್ಯರು ಕ್ರಿ.ಶ, 1ನೆಯ ಶ.ದಲ್ಲಿ ದಕ್ಷಿಣಕ್ಕೆ ಬಂದಾಗ, ಮಾನ್ಯಖೇಟದಲ್ಲಿ ಜೈನಾ ಚಾರ್ಯರಿದ್ದುದನ್ನು ಹರಿಭದ್ರಸೂರಿಯು (ಕ್ರಿ.ಶ. 7 ಶ.) ದಾಖಲಿಸಿದ್ದಾನೆ. ಕರ್ನಾಟಕದ ಕೆಲವು ಪ್ರಸಿದ್ಧ ಜೈನಾಚಾರ್ಯರು ಮಾನ್ಯಖೇಟದವರು ; ವೀರಸೇನ, ಜಿನಸೇನ, ಗುಣಭದ್ರ, ಜಿನಚಂದ್ರ, ಅಜಿತಸೇನ ಮೊದಲಾದವರು. ಶ್ರೀ ವಿಜಯ, ಮಹಾವೀರಾಚಾರ್ಯ. ಶಾಕಟಾಯನ, ಪುಷ್ಪದಂತ, ಪೊನ್ನ. ರನ್ನ, ಪಂಪ-ಮೊದಲಾದ ಜೈನ ಕವಿಗಳೂ ; ಬಂಕೇಯ, ಭರತ ಮುಂತಾದ ಜೈನ ದಂಡನಾಯಕರೂ ಮಾನ್ಯ ಖೇಟದ ಪುತ್ಥಳಿಗಳೆಂದು ನೆನೆದಾಗ ಈ ನೆಲದ ಹಿರಿಮೆ ಮನವರಿಕೆಯಾಗುತ್ತದೆ.

ಮಾನ್ಯಖೇಟವು ಕ್ರಿ.ಶ. 973ರವರೆಗೆ ರಾಷ್ಟ್ರಕೂಟರಿಗೂ ಅಲ್ಲಿಂದ 1050ರ ವರೆಗೆ ಚಾಲುಕ್ಯರಿಗೂ ರಾಜಧಾನಿಯಾಗಿತ್ತು. ಅಷ್ಟುಮಾತ್ರವಲ್ಲ, ಅದು ಅಂದಿನ ಇಡೀ ದಕ್ಷಿಣ ಭಾರತದ ರಾಜಕೀಯ ಚುವಟಿಕೆಗಳ ನೆಲೆವೀಡು. ಸಾಂಸ್ಕೃತಿಕ ಜಗತ್ತಿನ ಸ್ಕಂಧಾವಾರ, ಜೈನ ಸಮಾಜದ ಸಮವಸರಣ ಕ್ಷೇತ್ರವೂ ಆಗಿತ್ತು. ಜೈನರು ತೆಂಕಣ ನಾಡಿನಲ್ಲೊಂದು ಪ್ರಬಲ ಸಮಾಜವಾಗಿ ಸಂಘಟಿತರಾದದ್ದು ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ : ಆಮೇಲೆ ಅವರು ಚಾರಿತ್ರಿಕವಾಗಿ ವಿಘಟಿತರಾದದ್ದೂ ಇಲ್ಲೇ ಎಂಬುದು ಚರಿತ್ರೆಯ ವಿಪರ್ಯಾಸ. ಯಾಪನೀಯಪಂಥದ ಚಟುವಟಿಕೆಯ ಪ್ರಾಬಲ್ಯವಿದ್ದುದೂ ಈ ಹೈಕ ವಲಯದಲ್ಲೇ. ಗಂಗರ ಕಾಲದ ಜೈನ ಸಾಹಿತ್ಯವೇ

ಏನು. ಒಟ್ಟು ಕನ್ನಡ ಸಾಹಿತ್ಯವೇ ಸೀಮಿತವಾದದ್ದು ಮತ್ತು ಬಹುಮಟ್ಟಿಗೆ ಅನುಪಲಬ್ಧ. ಗಂಗರು ಜೈನಧರ್ಮಕ್ಕೂ ಜೈನಸಾಹಿತ್ಯಕ್ಕೂ ಕೊಟ್ಟ ಕೊಡುಗೆಯ ಸ್ವರೂಪವನ್ನು ಅಧಿಕೃತವಾಗಿ ಕಲ್ಪಿಸಿಕೊಳ್ಳಲು ಉಪಲಬ್ಧ ಸಾಮಗ್ರಿ ಸ್ವಲ್ಪವೇ ಇದೆ. ಆದ್ದರಿಂದ 'ಇದು ಕನ್ನಡ ಸಾಹಿತ್ಯ', 'ಇದು ಜೈನ ಸಾಹಿತ್ಯ' ಎಂದು ಮೂರ್ತಿವತ್ತಾಗಿ ಕಾಣಿಸಿಕೊಳ್ಳುವುದು ರಾಷ್ಟ್ರಕೂಟರ ಕಾಲದಿಂದ ಮತ್ತು ಹೈದರಾಬಾದು ಕರ್ನಾಟಕದ ಭಾಗದಲ್ಲಿ.

'ಹೈದರಾಬಾದು ಕರ್ನಾಟಕ ಜೈನ ಸಾಹಿತ್ಯ' ಎಂಬ ಶೀರ್ಷಿಕೆಯನ್ನೆ ಸ್ವೀಕರಿಸಿ, ಅದರೊಳಗೆ ಹೈದರಾಬಾದು ಕರ್ನಾಟಕ ಪ್ರದೇಶವನ್ನು ಆಳಿದ ರಾಜರ ಕಾಲದ ಜೈನ ಸಾಹಿತ್ಯ ಎಂದು ಅನ್ವಯಿಸಿಕೊಂಡರೆ ಅಲ್ಲಿಗೆ ಇಡೀ ಕನ್ನಡ ಸಾಹಿತ್ಯದ ಶ್ರೇಷ್ಠ ಕೃತಿಗಳ ಸಿಂಹಪಾಲು ಹೈದರಾಬಾದು ಕರ್ನಾಟಕ ಭಾಗದ ಕೊಡುಗೆಯೇ ಆಗುತ್ತದೆ.

ಕನ್ನಡ ಸಾಹಿತ್ಯ ಪರ್ವತ ಶ್ರೇಣಿಯ ಶಿಖರಗಳಲ್ಲಿ ನಿಂತಿರುವುದು ಫಲವತ್ತಾದ ಹೈದರಾಬಾದು ಕರ್ನಾಟಕ ಪ್ರದೇಶದಲ್ಲಿ. ಕನ್ನಡದೊಂದಿಗೆ ಪ್ರಾಕೃತ ಸಂಸ್ಕೃತ ಜೈನಸಾಹಿತ್ಯದ ಶ್ರೇಷ್ಠಕೃತಿಗಳು ಇಲ್ಲಿಯೇ ರಚಿತವಾಗಿವೆ. ಇವನ್ನು ಪರಿಭಾವಿಸಿದಾಗ ಸಮಸ್ತ ಜೈನ ವಾಙ್ಮಯ ಗಂಗೋತ್ರಿಗೆ ಹೈದರಾಬಾದು ಕರ್ನಾಟಕವೇ ಜನ್ಮಸ್ಥಾನ. ಉಗಮಕೇಂದ್ರ ಎಂಬುದು ಸ್ಪಷ್ಟವಾಗುತ್ತದೆ. ಕನ್ನಡ ಸಾಹಿತ್ಯವನ್ನೇ ಅಲ್ಲದೆ ಅದರ ಮೂಲಕ ಕನ್ನಡ ಜನಮಾನಸ ದರ್ಶನ ಮಾಡಿಸಿದವರು, ಕನ್ನಡ ಸಂಸ್ಕೃತಿಯಸಾರ ಸ್ವರೂಪವನ್ನು ತೋರಿಸಿದವರು, ಮತ್ತು ಕನ್ನಡಕ್ಕೆ ಅಭಿಜಾತ ಸಾಹಿತ್ಯ ಪರಂಪರೆಯನ್ನು ನಿರ್ಮಿಸಿಕೊಟ್ಟವರು ಹೈದರಾಬಾದು ಕರ್ನಾಟಕ ಭಾಗದ ಕವಿಗಳು.

ಹೈದರಾಬಾದು ಕರ್ನಾಟಕದ ಅಂದಿನ ವ್ಯಾಪ್ತಿಯ ಗೋದಾವರಿನದಿಯ ವರೆಗಿನ ಎಷ್ಟೋಭಾಗ ಏಕೀಕರಣವಾಗಿರುವ ಕರ್ನಾಟಕಕ್ಕೆ ದಕ್ಕಲಿಲ್ಲ. ಆದರೆ ಆ ಭಾಗದ ಸಾರಸ್ವತ ಸಾರ ಸರ್ವಸ್ವವಾದ ಸಾಹಿತ್ಯ ಪ್ರಪಂಚ ಮಾತ್ರ ಕರ್ನಾಟಕಕ್ಕೆ ಉಳಿದು ಬಂದಿದೆ. ಹೀಗಾಗಿ ಹಳಗನ್ನಡ ಸಾಹಿತ್ಯದ ಸಮೃದ್ಧಿಯಷ್ಟೂ ಹೈದರಾಬಾದು ಕರ್ನಾಟಕದ ದೇಣಿಗೆ. ರತ್ನತ್ರಯರೂ ಜಿನಸಮಯ ದೀಪಕರೂ ಈ ಮಣ್ಣಿನ ಬೆಳಕಿನ ಕುಡಿಗಳು ಎಂಬುದು ಕಿರೀಟಕ್ಕೆ ಗರಿಸಿಕ್ಕಿಸಿದಂತೆ, ದೇಗುಲಕ್ಕೆ ಕಳಶವಿಟ್ಟಂತೆ.

## ಹೈದರಾಬಾದು ಕರ್ನಾಟಕದ ಜೈನ ಸಾಹಿತ್ಯ

### ವಿಹಂಗಮ ನೋಟದ ಕೋಷ್ಟಕ

| | ಕವಿಗಳು | ಕಾಲ | ಕೃತಿ | ಭಾಷೆ |
|---|---|---|---|---|
| 1 | ಕವಿರಾಜ ಮಾರ್ಗೋಕ್ತ ಗದ್ಯ ಪದ್ಯ ಕವಿಗಳು | | ? | ? |
| 2 | ಅಕಲಂಕದೇವ (ಭಟ್ಟಾಕಳಂಕ) | ಸು. ಕ್ರಿ.ಶ. 700 | ತತ್ವಾರ್ಥರಾಜವಾರ್ತಿಕ | ಸಂಸ್ಕೃತ |
| | | | ಅಷ್ಟಶತೀ | |
| | | | ನ್ಯಾಯವಿನಿಶ್ಚಯ | |
| 3 | ಭ್ರಾಜಿಷ್ಣು | ಸು. ಕ್ರಿ.ಶ. 800 | ಆರಾಧನಾ ಕರ್ಣಾಟ ಟೀಕಾ | ಕನ್ನಡ |
| 4 | ಶ್ರೀ ವಿಜಯ | ಸು. 850 | ಕವಿರಾಜಮಾರ್ಗ | ಕನ್ನಡ |
| 5 | ಜಿನಸೇನಾಚಾರ್ಯ | ಸು. 850 | ಪಾರ್ಶ್ವನಾಥ ಪುರಾಣ | ಸಂಸ್ಕೃತ |
| | | | ಆದಿಪುರಾಣ | ಸಂಸ್ಕೃತ |
| | | | ಜಯಧವಲಾಟೀಕು | ಪ್ರಾಕೃತ |
| 6 | ನೃಪತುಂಗ (ಅಮೋಘ ವರ್ಷ) | 815-878 | ಪ್ರಶ್ನೋತ್ತರ ರತ್ನಮಾಲಾ | ಸಂಸ್ಕೃತ |
| 7 | ಗುಣಭದ್ರಾಚಾರ್ಯ | ಸು. 890 | ಉತ್ತರ ಪುರಾಣ | ಸಂಸ್ಕೃತ |
| 8 | ಮಹಾವೀರಾಚಾರ್ಯ | ಸಂ. 870 | ಗಣಿತಸಾರ ಸಂಗ್ರಹ | ಸಂಸ್ಕೃತ |
| 9 | ಶಾಕಟಾಯನ | ಸು. 870 | ಅಮೋಘ ವೃತ್ತಿ | ಸಂಸ್ಕೃತ |

| | ಕವಿಗಳು | ಕಾಲ | ಕೃತಿ | ಭಾಷೆ |
|---|---|---|---|---|
| 10 | ಪೊನ್ನ | 960-965 | ಭುವನೈಕ ರಾಮಾಭ್ಯುದಯ | ಕನ್ನಡ |
| | | | ಶಾಂತಿ ಪುರಾಣಂ | ಕನ್ನಡ |
| | | | ಜಿನಾಕ್ಷರಮಾಲೆ | ಕನ್ನಡ |
| | | | ಆತಕೂರು ಶಾಸನ (?) | ಕನ್ನಡ |
| 11 | ಪುಷ್ಪದಂತ | 965 | ತಿಸಟ್ಠಿ ಮಹಾಪುರಿಸ ಗುಣಾಲಂಕಾರು | ಪ್ರಾಕೃತ |
| | | | ಜಸಹರ ಚರಿಉ | ಪ್ರಾಕೃತ |
| | | | ಣಾಯಕುಮಾರ ಚರಿಉ | ಪ್ರಾಕೃತ |
| 12 | ರನ್ನ | 993-1007 | ಅಜಿತ ಪುರಾಣ | |
| | | | ರನ್ನಕಂದ ನಿಘಂಟು | |
| | | | ಪರಶುರಾಮ ಚರಿತೆ | |
| | | | ಚಕ್ರೇಶ್ವರ ಚರಿತೆ | |
| | | | ಸಾಹಸ ಭೀಮ ವಿಜಯಂ | |
| | | | ಲಕ್ಕುಂಡಿ ಶಾಸನ | |
| 13 | ನಾಗವರ್ಮ | 1042 | ವರ್ಧಮಾನ ಪುರಾಣ | ಕನ್ನಡ |
| | | | ವಸ್ತುಕೋಶ | ಕನ್ನಡ |
| | | | ಕಾವ್ಯಾವಲೋಕನ | ಕನ್ನಡ |
| | | | ಕರ್ಣಾಟಕ ಭಾಷಾಭೂಷಣ | ಸಂಸ್ಕೃತ |
| | | | ವತ್ಸರಾಜ ಚರಿತೆ (?) | ಕನ್ನಡ |

| | ಕವಿಗಳು | ಕಾಲ | ಕೃತಿ | ಭಾಷೆ |
|---|---|---|---|---|
| 14 | ಶ್ರೀಧರಾಚಾರ್ಯ | 1049 | ಜಾತಕ ತಿಲಕ | ಕನ್ನಡ |
| 15 | ಶಾಂತಿನಾಥ (ಅರ್ಥಾಧಿಕಾರಿ, ಮಂತ್ರಿ, ಕವಿ) | 1060 | ಸುಕುಮಾರ ಚರಿತಂ | ಕನ್ನಡ |
| | | | ಶಿಕಾರಿಪುರ ಮತ್ತು ಗಾವರವಾಡ ಶಾಸನಗಳು | |
| 16 | ಕೀರ್ತಿವರ್ಮ (ವಿಷ್ಣುವರ್ಧನ ವಿಜಯಾದಿತ್ಯ) | 1080 | ಗೋವೈದ್ಯ | ಕನ್ನಡ |
| 17 | ನಾಗಚಂದ್ರ (ಅಭಿನವ ಪಂಪ) | 1090 | ಮಲ್ಲಿನಾಥ ಪುರಾಣಂ | ಕನ್ನಡ |
| | | | ರಾಮಚಂದ್ರ ಚರಿತ ಪುರಾಣಂ | ಕನ್ನಡ |
| | | | ಜಿನಮುನಿತನಯ (9) ಶಾಸನಗಳು | |
| 18 | ನಯಸೇನ ಕವಿ | 1112 | ಧರ್ಮಾಮೃತಂ | ಕನ್ನಡ |
| 19 | ಬ್ರಹ್ಮ ಶಿವ | 1175 | ಸಮಯ ಪರೀಕ್ಷೆ | ಕನ್ನಡ |
| 20 | ಅಗ್ಗಳ (ದೇವ) | 1180 | ಚಂದ್ರಪ್ರಭ ಪುರಾಣಂ | ಕನ್ನಡ |

[ಈ ಪಟ್ಟಿಯಲ್ಲಿ...ರನ್ನ, ಶಾಂತಿನಾಥ, ನಾಗಚಂದ್ರ, ನಯಸೇನ ಕವಿಗಳನ್ನು ಸೇರಿಸುವುದಕ್ಕೆ ಕಾರಣ ಅವರುಗಳು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಆಶ್ರಯ ಪಡೆದು ಕಾವ್ಯ ರಚಿಸಿದರೆಂಬುದು].

[ವಿ. ಸೂ. : ಗುಲಬರ್ಗಾ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ 1993ರ ನವೆಂಬರ್ ತಿಂಗಳ 19 ಮತ್ತು 20 ರಂದು ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಸಂಪ್ರಬಂಧ : ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ವಿಶೇಷ ಕೃತಜ್ಞತೆಗಳು]

1 Altekar A. S. :—Rashtakutas and their times, Poona, 1967.

2 Sastry K. A. N. :—History of South India, Oxford, 1958.

3 Upadhye A. N. :—Upadhye papers, Mysore, 1983.

4 Vaidya P. L. (ed) :—Mahapurama of pushpadanta.

5 Nagaraj Rao M. S. (ed) :—The Chalukyas of Kalyana, 1983.

6 Nagarajaiah Hampa :—Influence of Prakriṭ Literature on Kannada Literature, Prakrit Bharati, 1990.

7 ಕಲಬುರ್ಗಿ ಎಂ. ಎಂ. :—ಕವಿರಾಜ ಮಾರ್ಗ ಪರಿಸರ ಕನ್ನಡ ಸಾಹಿತ್ಯ 1970

8 ಕಮಲಾ ಹಂಪನಾ<br>
9 ಕೆ. ಆರ್. ಶೇಷಗಿರಿ } ಸಂ–ಚಾವುಂಡರಾಯ ಪುರಾಣಂ ಬೆಂಗಳೂರು 1983.

10 ಬ್ರಹ್ಮಪ್ಪ ಜಿ (ಅನುವಾದ) :—ಆಚಾರ್ಯ ಶ್ರೀ ಜಿನಸೇನ ಗುಣಭದ್ರರ ಮಹಾಪುರಾಣ ಹೊಂಬುಜ 1985.

11 ಶಾಂತಿರಾಜ ಶಾಸ್ತ್ರಿ ಎತರ್ೂರು :—ಮಹಾಪುರಾಣ, ಪೂರ್ವ ಪುರಾಣ-ಉತ್ತರ ಪುರಾಣ, ಮೂರನೆಯ ಮುದ್ರಣ 1993.

12 ಹೀರಾಲಾಲ್ ಜೈನ್ :—ಭಾರತೀಯ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ. (ಕನ್ನಡ ಅನುವಾದ) ಮಿರ್ಜಿ ಅಣ್ಣಾರಾಯ, ಸೊಲ್ಲಾಪುರ 1971.

13 ಶುಭಚಂದ್ರ :—ಅಪಭ್ರಂಶ ಕವಿ ಪುಷ್ಪದಂತ, 'ದಿವ್ಯ ಧ್ವನಿ'–(ಸಂ) ಹಂಪ ನಾಗರಾಜಯ್ಯ, 1975, ಪುಟ 125–129.

14 ಬಾಲಚಂದ್ರರಾವ್ ಎಸ್. :—ಜೈನ ಗಣಿತಜ್ಞ ಮಹಾವೀರಾಚಾರ್ಯ, ಬೆಂಗಳೂರು 1981.

15 ಮಹಿಷವಾಡಿ ಬಿ. ಬಿ. :—ಜೈನವಾಙ್ಮಯ ಪರಿಶೋಧನೆ, ಧಾರವಾಡ 1977.

16 ಮಹಾವೀರಾಚಾರ್ಯ :—ಗಣಿತಸಾರ ಸಂಗ್ರಹ, ಸೋಲಾಪುರ, 1963.

17 ಕಮಲಾ ಹಂಪನಾ :—1 ಅನೇಕಾಂತವಾದ, ಬೆಂಗಳೂರು.<br>
2 ಜೈನ ಸಾಹಿತ್ಯ ಪರಿಸರ, ಬೆಂಗಳೂರು.

18 ನಾಗರಾಜಯ್ಯ ಹಂಪ :—(ಸಂ) ಶಾಂತಿ ಪುರಾಣಂ, ಬೆಂಗಳೂರು 1987.<br>
(ಸಂ) ವಡ್ಡಾರಾಧನೆ, ಬೆಂಗಳೂರು 1993.<br>
ಯಕ್ಷ-ಯಕ್ಷಿಯರು, ಬೆಂಗಳೂರು 1976.<br>
ನಾಗಚಂದ್ರನ ಇತಿವೃತ್ತ, ಗದಗ (1990) 1993.

# ರನ್ನನ ಕಾವ್ಯಗಳಲ್ಲಿ
# ವರ್ಣ ವ್ಯವಸ್ಥೆಯ ವಿರೋಧದ ಸ್ವರೂಪ : ಸಂವಾದ

ಡಾ. ಅರವಿಂದ ಮಾಲಗತ್ತಿ

ಮಹಾಕಾವ್ಯಗಳು ಪರಂಪರಾಗತವಾಗಿ ಹೊತ್ತುಕೊಂಡು ಬಂದ ಅಷ್ಟಾದಶ ವರ್ಣನೆಗಳ ಭಾರವನ್ನು ಇಳಿಸಿದ ಕೀರ್ತಿ ರನ್ನನಿಗೆ ಸಲ್ಲುತ್ತದೆ. ಇದಲ್ಲದೆ 'ಸಿಂಹಾವಲೋಕನ ಕ್ರಮ' (1-45) ಕಾವ್ಯವನ್ನು ರಚಿಸಿ, ಹೊಸಬಗೆಯ ರಚನಾ ತಂತ್ರವನ್ನೂ ಕಾವ್ಯಕ್ಷೇತ್ರಕ್ಕೆ ಕೊಟ್ಟಿದ್ದಾನೆ. ಈತ ಅಜಿತಪುರಾಣ, ಗದಾಯುದ್ಧ ಅಥವಾ ಸಾಹಸ ಭೀಮ ವಿಜಯಂ ರಚಿಸಿದ್ದಲ್ಲದೆ ಪರಶುರಾಮ ಚರಿತ, ಚಕ್ರೇಶ್ವರ ಚರಿತ, ಅಜಿತ ತೀರ್ಥೇಶ್ವರ ಚರಿತ ಎಂಬ ಕೃತಿಗಳನ್ನು ಬರೆದಿದ್ದಾನೆ. ಮೊದಲು ಗುರುತಿಸಲಾದ ಎರಡು ಕೃತಿಗಳು ಲಭ್ಯವಿರುವುದರಿಂದ ಆ ಕೃತಿಗಳನ್ನು ನಮ್ಮ ವಿಚಾರದ ಚರ್ಚೆಗೆ ಆಕರವಾಗಿಟ್ಟುಕೊಂಡು ಚರ್ಚಿಸಬಹುದಾಗಿದೆ.

'ರತ್ನಕವಿ' ಎಂದು ಕರೆಯಿಸಿಕೊಳ್ಳುವ ರನ್ನ ಕವಿ ಪಂಪನಂತೆ ನೇರವಾಗಿ ತನ್ನ ಜಾತಿಯನ್ನು 'ಬಳಗಾಜಿಕುಲ' (11–45) ಎಂದು ಹೇಳಿಕೊಂಡಿದ್ದಾನೆ. ಇದಲ್ಲದೆ ಆದಿ ಪುರಾಣದಲ್ಲಿ—

> "ತ್ರಿಜಗದೊಳಾದಿಪುರಾಣಮುಮಜಿತಪುರಾಣಮುಮನೆಸೆಯೆ
> ಪೇಳ್ದುದರಿಂದಂ ದ್ವಿಜವಂಶಧ್ವಜಂ ವೈಶ್ಯವಂಶಧ್ವಜರೆನ್ನ
> ದರೊಳಗೆ ಪಂಪನುಂ ರತ್ನನುಮಂ"

ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ಪಂಪ 'ದ್ವಿಜ ವಂಶ'ಕ್ಕೆ ಸಂಬಂಧಿಸಿದಂತೆ ತಾನು 'ವೈಶ್ಯ ವಂಶ'ಕ್ಕೆ ಸಂಬಂಧಿಸಿದವನೆಂದು ಹೇಳಿಕೊಳ್ಳುವುದರಿಂದ ಪಂಪ ದ್ವಿಜನಿದ್ದು ಜೈನಧರ್ಮಕ್ಕೆ ಬಂದಂತೆ ತಾನು ಬಳೆಗಾರನಾಗಿದ್ದು ಜೈನ ಧರ್ಮಕ್ಕೆ ಬಂದುದನ್ನು ಹೇಳಿಕೊಳ್ಳುತ್ತಿರುವುದರಿಂದ ವೈಶ್ಯರಲ್ಲಿ 'ಬಳೆಗಾರ' ಕುಲವೇನು ದೊಡ್ಡದಲ್ಲ. ಅದು

---

1 ರನ್ನ ಹೀಗೆ ನೇರವಾಗಿ ಹೇಳಿಕೊಂಡಾಗಲೂ, ರನ್ನ ಬಳೆಗಾರ ಕುಲಕ್ಕೆ ಸಂಬಂಧಿಸಿದವನಲ್ಲ ಎಂದು ವಾದಿಸುವವರೂ ಇದ್ದಾರೆ. ವಿವರಕ್ಕಾಗಿ ನೋಡಿ :
ಬಾ. ರಾ. ಗೋಪಾಲ್ : ಪ್ರಬುದ್ಧ ಕರ್ನಾಟಕ, 40–4 (ಉದ್ಧರಣೆ)
ಬೆಂಗಳೂರು ವಿ. ವಿ. : ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ–2. 150
ಮೈಸೂರು ವಿ. ವಿ. : ಕನ್ನಡ ಸಾಹಿತ್ಯ ಚರಿತ್ರೆ–ಸಂ–3, 584.

ತುಂಬಾ ಕೆಳಸ್ತರದ್ದು. ಹುಟ್ಟಿನಿಂದ ಜೈನನಾಗಿದ್ದು, ಹೀಗೆ ಕೆಳಸ್ತರದಿಂದ ಬಂದ ರನ್ನನ ಕೃತಿಗಳ ಸಮೀಕ್ಷೆಯನ್ನು ಮಾಡಿದರೆ ಬ್ರಾಹ್ಮಣರಿಗಿಂತ ತಾನೇನು ಕಡಿಮೆಯಲ್ಲ ವೆಂದು ಹೇಳುವ ಮನೋಭಾವ ಸ್ಪಷ್ಟವಾಗುತ್ತದೆ. ಇದಲ್ಲದೆ, ರನ್ನನ ಸಾಮಾಜಿಕ ಸಂದರ್ಭದಲ್ಲಿ ತನಗೆ ಸಮಕಟ್ಟುವ ಕವಿಗಳು (ವೈದಿಕ) ಇಲ್ಲದ್ದರಿಂದ, ಇದ್ದರೂ ಸಮನಲ್ಲದ್ದರಿಂದ ಹಿರಿಯ ಕವಿಗಳನ್ನು ಗೌರವಿಸಿ ಸ್ಮರಿಸುತ್ತ ಪದೇಪದೆಯಾಗಿ ತನ್ನ ಬಗ್ಗೆ, ತನ್ನ ಕಾವ್ಯದ ಬಗ್ಗೆ ಆತ್ಮವಿಶ್ವಾಸ ತಳೆದು ಮಾತನಾಡುವಂತೆ ಮಾಡಿವೆ. ಬ್ರಾಹ್ಮಣನಾದ ದ್ರೋಣ ಧನುರ್ವಿದ್ಯೆಯಲ್ಲಿ ಪಾರಂಗತನಾದರೂ ಪ್ರಾಯೋಗಿಕವಾಗಿ ಸಮರ್ಥರಲ್ಲ. ಹೀಗಾಗಿ 'ಕಮ್ಮಱಿಯೋಜನೆನಿಸಿದಂ ಬಿಲ್ಲೋಜಂ' (2-13) ಎಂದು ಚುಚ್ಚು ನುಡಿಯುವ ದುರ್ಯೋಧನ ಇಷ್ಟಕ್ಕೆ ಪೂರ್ಣವಿರಾಮ ಹಾಕದೆ—

ಈಯಲಱಿಯಲ್ ಶರಣ್ಬುಗೆ।
ಕಾಯಲ್ ಕ್ಷತ್ರಿಯರೆ ಬಲ್ಲರಬ್ರಹ್ಮಣ್ಯ॥

ಭೋಯೆನಲುಂ ಬ್ರಾಹ್ಮಣರವಿ ।
ಧೋಯೆನಲುಂ ಬಲ್ಲರಿಱಿಯಲವರೆಂತಱಿವರ್॥ (2-16)

ಚಾತುರ್ವರ್ಣ್ಯದೊಳಂ ದ್ವಿಜ ।
ಜಾತಿಗೆ ದರ್ಭಾಧಿಕಾರಮಲ್ಲದೆ ವಂಶೋ
ದ್ಭೂತ ನೃಪೋಚಿತಮರಿಯಂ
ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ (2-17)

ಹೀಗೆ ಬ್ರಾಹ್ಮಣರಲ್ಲಿರುವ ಕ್ಷಾತ್ರಗುಣ ಯಾವ ಮಟ್ಟದ್ದು ? ಎನ್ನುವುದನ್ನು 'ಅಯ್ಯೋ, ಅಯ್ಯೊ ಎಂದು ಲೊಚಗುಟ್ಟಲು ಮಾತ್ರ ಯೋಗ್ಯರು. ಕ್ಷತ್ರಿಯರಂತೆ ಕಾಯಲು ಕೊಲ್ಲಲು ಸಮರ್ಥರಲ್ಲ' ಎನ್ನುವ ವಿಚಾರವನ್ನು ದುರ್ಯೋಧನನ ಬಾಯಿಂದ ಹೇಳಿಸುವ ರನ್ನ ಇಷ್ಟಕ್ಕೆ ನಿಲ್ಲಿಸದೆ ಅವರಲ್ಲಿಯ ಕ್ಷಾತ್ರತ್ವದ ಸತ್ವವನ್ನು ಅಳೆಯಲು ದ್ರೋಣನ ಮೈ ರಕ್ತದ ರುಚಿಯವರೆಗೂ ಬರುತ್ತಾನೆ. ರಣರಂಗದಲ್ಲಿಯ ಪಿಶಾಚಿಗಳು ಕ್ಷಾತ್ರತೇಜಸ್ಸಿನಿಂದ ಕೂಡಿದ ದುರ್ಯೋಧನನ ರಕ್ತವನ್ನು ಕುಡಿಯಲು ಆಸೆಪಡುತ್ತವೆಯೇವಿನಃ ಬ್ರಾಹ್ಮಣನಾದ ದ್ರೋಣನ ರಕ್ತವನಲ್ಲ. ಏಕೆಂದರೆ ಆ ಪಿಶಾಚಿಯೇ ಹೇಳುವಂತೆ ('ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ದ್ವಿಜವಂಶಜಂ') ಬ್ರಾಹ್ಮಣನಾದ ದ್ರೋಣನ ರಕ್ತ ನನಗೆ ಹಿಡಿಸದು'.

ಈ ಮೇಲಿನ ಸಂದರ್ಭದಲ್ಲಿಯ ಮಾತುಗಳ ತಾತ್ಪರ್ಯವನ್ನು ಗಮನಿಸಿದರೆ ಬ್ರಾಹ್ಮಣರ ವಿಚಾರವಾಗಿ ತನ್ನ ಹೊಟ್ಟೆಯಲ್ಲಿ ನಿಗಿ ನಿಗಿ ಎನ್ನುವ ಬೆಂಕಿಯ ಕೆಂಡವನ್ನೇ ಇಟ್ಟುಕೊಂಡು ಪಾತ್ರಗಳ ಮೂಲಕ ಹಾಗೆ ಹೇಳಿಸುತ್ತಿದ್ದಾನೆ ಎನಿಸುವುದು ಸಹಜ. ಮೇಲಿನ ಕೆಲ ಬಿಡಿ ಪದ್ಯಗಳ ಕುರಿತು ಚರ್ಚಿಸಿದವರು 'ತನ್ನ ದ್ರೋಣನ ನೆಪದಲ್ಲಿ ಬ್ರಾಹ್ಮಣರ ಮೇಲೆ ಹರಿಹಾಯುತ್ತಾನೆ'* ಎಂದೂ ಅಭಿಪ್ರಾಯ ಪಟ್ಟಿದ್ದಾರೆ.

* ಕನ್ನಡ ಸಾಹಿತ್ಯದ ಚಾರಿತ್ರಿಕ ಬೆಳವಣಿಗೆ : ಸಿ. ವೀರಣ್ಣ 295

ರನ್ನನ ಸಮಗ್ರ ಕಾವ್ಯದ ಹಿನ್ನೆಲೆಯಲ್ಲಿ ಈ ಮೇಲಿನ ಮಾತುಗಳನ್ನು ಅವಲೋಕಿಸಿದರೆ ಕ್ಷಾತ್ರ ಯುಗದಲ್ಲಿ ರೂಪುಗೊಂಡ ಈ ಕಾವ್ಯ ರಾಜನೀತಿ, ಯುದ್ಧ ನೀತಿ ಮತ್ತು ವರ್ಣ ನೀತಿಗೆ ಬದ್ಧವಾಗಿ ಬಂದಿದೆ. ಜೈನನಾಗಿ ಯೋಧನೂ ಆದ ರನ್ನನ ವರ್ಣ ನೀತಿಯು ಬದ್ಧತೆಯು ಚರ್ಚಾಸ್ಪದವೇನಲ್ಲ. ಏಕೆಂದರೆ ಪಂಪನಂತಹ ಜೈನ ಕವಿಯೂ ವರ್ಣ ವ್ಯವಸ್ಥೆಗೆ ಬದ್ಧರಾಗಿದ್ದುದನ್ನು ಕಾಣುತ್ತೇವೆ. ಅಷ್ಟೇ ಅಲ್ಲ, ರನ್ನ, ಪಂಪ ಹೇಳುವ ಎಷ್ಟೋ ವಿಚಾರಗಳನ್ನು ಅಪ್ರತ್ಯಕ್ಷವಾಗಿ ಒಪ್ಪಿ, ಕೆಲವೆಡೆ ತನ್ನ ಕಾವ್ಯದಲ್ಲಿ ಮುಂದುವರಿಸಿದಂತೆ ಕಂಡುಬರುತ್ತದೆ. ಇದು ಗದಾಯುದ್ಧದಲ್ಲಿ ಅಧಿಕವಾಗಿದೆ. ಅಜಿತಪುರಾಣದಲ್ಲಿ ಬ್ರಾಹ್ಮಣಕುಲ ಹೇಗೆ ಹುಟ್ಟಿತು ಎನ್ನುವುದನ್ನು ಪಂಪ ಹೇಳುವಂತೆ[1] ಒಂದು ಮಾತಿನಲ್ಲಿ ಹೇಳಿ ಮುಂದೆ ಸಾಗುತ್ತಾನೆ. ಎಂದರೆ ಅಲ್ಲಿಯದೆಲ್ಲವೂ ಇಲ್ಲಿ ಅನ್ವಯವಾಗುವುದೆಂಬ ಭಾವ ಸ್ಫುರಿಸುತ್ತದೆ. ವರ್ಣ ವ್ಯವಸ್ಥೆಯ ನೀತಿಯಲ್ಲಿ ಬ್ರಾಹ್ಮಣ ಜಾತಿಗೆ ಇರುವ ಮಿತಿಗಳನ್ನೇ ಗಮನದಲ್ಲಿಟ್ಟುಕೊಂಡು ನೋಡಿದರೂ ಮೂಲದ ದ್ರೋಣನ ವ್ಯಕ್ತಿತ್ವವನ್ನು ಗಮನದಲ್ಲಿಟ್ಟುಕೊಂಡು ನೋಡಿದರೂ ಅವು ವ್ಯತಿರಿಕ್ತವಾದ ವಿಚಾರಗಳೇನಲ್ಲ. ರಾಜನೀತಿ ಮತ್ತು ಯುದ್ಧ ನೀತಿಯ ವಿಚಾರಗಳಂತೂ ಹೆಜ್ಜೆ ಹೆಜ್ಜೆಗೆ ತೂಕ ಬದ್ಧವಾಗಿ ರನ್ನ ಕೊಡುತ್ತ ಹೋಗುತ್ತಾನೆ.[2] ಇವರ ಜೊತೆಗೆ ರನ್ನನ ಅಸಮಧಾನದ ಮನೋಬಲವೂ ಸೇರಿದೆ ಎನ್ನುವ ವಿಚಾರ ಉನ್ನತ ಹಂತದಲ್ಲಿ ನಿಲ್ಲದಿದ್ದರೂ ರನ್ನನ ಕ್ಷಾತ್ರ ತೇಜಸ್ಸಿನ ಕಾಲದಲ್ಲಿ ಬ್ರಾಹ್ಮಣರ ಇರುವಿಕೆ ಯಾವ ಬಗೆಯದ್ದಾಗಿತ್ತು ಎಂದು ಅರಗಿಸಿಕೊಳ್ಳುವ ಅಗ್ರಸ್ಥಾನದಲ್ಲಿ ನಿಲ್ಲುತ್ತದೆ.

ಜೈನರು ವರ್ಣವ್ಯವಸ್ಥೆಯನ್ನು ಒಪ್ಪಿಕೊಳ್ಳುತ್ತಾರೆ. ವರ್ಣವ್ಯವಸ್ಥೆಯಲ್ಲಿಯ ಪ್ರತಿಸ್ಪರ್ಧಿಗಳಾದ ವೈದಿಕರನ್ನು ವಿರೋಧಿಸುತ್ತಾರೆ. ಏಕೆಂದರೆ ಧಾರ್ಮಿಕ ಹಿಡಿತಗಳೆಲ್ಲ ಅವರ ಕೈಯಲ್ಲಿರುವುದೇ ಇದಕ್ಕೆ ಪ್ರಬಲ ಕಾರಣವಾಗಿದೆ. ವರ್ಣಾವಲಂಬಿತವಾದ ಧರ್ಮವನ್ನು ವಿರೋಧಿಸುವ ಪರಂಪರೆ ಕನ್ನಡದಲ್ಲಿ ಬೆಳೆಯಲೇ ಇಲ್ಲ. ಇದಕ್ಕೆ ಬದಲಾಗಿ ಧರ್ಮವನ್ನು ವಿರೋಧಿಸುವ ಪರಂಪರೆಯೇ ಬೆಳೆದಿದೆ.

ಪಂಪನು ಹಾಕಿಕೊಟ್ಟ ಕಾವ್ಯಮಾರ್ಗಗಳನ್ನು ಅನುಕರಿಸಿದ ಮುಂದಿನ ಕವಿಗಳೆಲ್ಲ ಪಂಪನಿಗೆ ಋಣಿಯಾಗಿದ್ದಾರೆ. ಪಂಪ ಜೈನನಾಗಿದ್ದು ಬ್ರಾಹ್ಮಣರಲ್ಲಿಯ ವ್ರತವಿಲ್ಲದ ಬ್ರಾಹ್ಮಣರನ್ನು ಮಾತ್ರ ಭೂಸುರರಲ್ಲ ಎಂದು ಹೇಳಿ, ಅವರೂ ಮನುಷ್ಯರೆಂದು ಇತರ ವರ್ಣಗಳಲ್ಲಿ ಸೇರಿಸಲು ಆತ ಜೈನ ಧರ್ಮೀಯನಾಗಿರುವುದು

---

1 ಆದಿಪುರಾಣ–157 ರಿಂದ 466 ಪುಟ 110 ರಿಂದ 112

2 ಕೊಲ್ಲುವ ಮತ್ತು ಕಾಯುವ ವಿಚಾರಗಳಿಗೆ ನೋಡಿರಿ : (4-28, 29)

ಮತ್ತು ಜೈನ ಧರ್ಮದ ಬ್ರಾಹ್ಮಣನಾಗಿರುವುದೇ ಕಾರಣವಾಗಿದೆ. ಪಂಪ ಹಾಕಿ ಕೊಟ್ಟ ಈ ನೆಲೆಗಟ್ಟನ್ನು ಮುಂದಿನ ಕವಿಗಳು ಅನುಕರಿಸಿದರೆ ವಿನಃ ಪರಿಷ್ಕರಿಸಲಿಲ್ಲ. ಹೀಗಾಗಿ ಕನ್ನಡದಲ್ಲಿ ಜೈನರು ವೈದಿಕ ಬ್ರಾಹ್ಮಣರ ವಿರುದ್ಧ ಬಂಡಾಯ ಮಾಡಿದರೇ ವಿನಃ ವರ್ಣಾವಲಂಬಿ ಧರ್ಮವನ್ನು ವಿರೋಧಿಸಲಿಲ್ಲ.

ವರ್ಣಾವಲಂಬಿತ ಧರ್ಮಗಳಲ್ಲಿ ನೇರ ವೈದಿಕ ವಿರೋಧಿಯಾದ ಜೈನಧರ್ಮಕ್ಕೆ ಸೇರಿದ ರನ್ನ ತನ್ನ ಕಾಲದ ವೈದಿಕರು ರಾಜ್ಯಾಡಳಿತಕ್ಕೆ ಕಾಲಿಡಬಾರದೆಂದು ಹೇಳುವುದ ಕ್ಕಾಗಿ, 'ಬ್ರಾಹ್ಮಣರು ಏನಿದ್ದರೂ, ದರ್ಭಾಧಿಕಾರಿಗಳೆಂದೂ, ಬೇರೆಯವರು ರಕ್ಷಿಸ ಬೇಕಾದವರೆಂದೂ ಹೇಳಿ ವರ್ಣಾಶ್ರಮ ಧರ್ಮವನ್ನು ಸಮರ್ಥಿಸುತ್ತಾನೆ.' ಎಂದು ಸಿ. ವೀರಣ್ಣನವರು ಹೇಳಿದರೂ ಇವರ ಎಲ್ಲಾ ವಿಚಾರಗಳನ್ನು ಒಪ್ಪಲಾಗದು. ಮೂಲದಲ್ಲಿ ಜೈನ ಧರ್ಮವು ವರ್ಣಾಶ್ರಮ ಧರ್ಮದ ವಿರುದ್ಧವೇ ಸಿಡಿದೆದ್ದು ನಿಂತಿದ್ದರೂ ಕನ್ನಡ ಜೈನ ಕವಿಗಳ ಕಾವ್ಯಗಳಿಂದ ಸ್ಪಷ್ಟವಾಗುವುದೆಂದರೆ ಇವರು ವರ್ಣಾಶ್ರಮ ಧರ್ಮದ ವಿರೋಧಿಗಳು ನಿಜ. ಆದರೆ ವರ್ಣವ್ಯವಸ್ಥೆಯ ವಿರೋಧಿ ಗಳಲ್ಲ. ಇವರು ನೇರವಾಗಿ ಮೊದಲ ವರ್ಣದ ಎಂದರೆ ಬ್ರಾಹ್ಮಣ ಕುಲದ ವಿರೋಧಿ ಗಳು. ಏಕೆಂದರೆ ಜೈನರಿಗೆ ಗೋಚರವಾದವರು, ನೇರ ಪ್ರತಿಸ್ಪರ್ಧಿಗಳಾದವರು ಮತ್ತು ಅವರ ಒಡನಾಟದಲ್ಲಿಯೇ ಬದುಕಿದವರು. ಹೀಗೆ ಬದುಕಿದವರಲ್ಲಿ ಅಧಿಕೃತ ವಾಗಿ ಬ್ರಾಹ್ಮಣರಿರುವುದೇ ಕಾರಣವಾಗಿದೆ. ಹೀಗೆಂದ ಮಾತ್ರಕ್ಕೆ ಈ ಕವಿಗಳು ಎಲ್ಲಾ ಬ್ರಾಹ್ಮಣರನ್ನು ವಿರೋಧಿಸುತ್ತಿದ್ದರೆಂದಲ್ಲ. ಕನ್ನಡಿಗರು ಉದಾರಿಗಳು ಎನ್ನುವ ಮಾತು ಜೈನ ಧರ್ಮೀಯರಿಗೆ ಹೊರತಾದುದೇನಲ್ಲ ಅಲ್ಲವೇ ? ಹೀಗಾಗಿ ಒಡಂಬಡಿಕೆಯ ನಡುವೆಯೇ ಈ ಸಂಘರ್ಷವನ್ನು ಕಾಣುತ್ತೇವೆ.

ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಸಂಹಾರಮಾಡಲು ಅವತರಿಸಿದ ಪರಶು ರಾಮನೂ ಬ್ರಾಹ್ಮಣನೇ ! ರನ್ನ ತನ್ನ ಕಾವ್ಯದಲ್ಲಿ ಈತನನ್ನು ತಂದು ಸತ್ಯಾಶ್ರಯನಿಗೆ ತಳಕು ಹಾಕುತ್ತಾನೆ (1-28). ರಾಜನನ್ನು ಓಲೈಸುವುದಕ್ಕಾಗಿ ರನ್ನ ಬ್ರಾಹ್ಮಣ ನಾದ ಪರಶುರಾಮನನ್ನು ಇಲ್ಲಿ ತಂದಿದ್ದಾನೆ ಎಂದು ಹೇಳಬಹುದು. ಆದರೆ ಇನ್ನೊಂದೆಡೆ ರನ್ನ ತನ್ನ ಕಾವ್ಯವನ್ನು ಬ್ರಾಹ್ಮಣನೂ ದಂಡನಾಯಕನೂ ಆದ ಕೇಶಿಯು ತಿದ್ದಿದ ಬಗ್ಗೆ ಹೇಳಿಕೊಂಡಿದ್ದಾನೆ (1-51) ಇದಲ್ಲದೆ ಸಂಜಯನಿಂದ 'ಪಾರ್ಥನ ಪೌರುಷ'ದ ಬಗ್ಗೆ ಹೇಳುವಾಗ ಬ್ರಾಹ್ಮಣ ಬಾಲಕನ ಹೋದ ಜೀವವನ್ನು ಮರಳಿ ಪಡೆದು ಬದುಕಿಸಿದ ಬಗ್ಗೆ ವಿವರಿಸುತ್ತಾನೆ (2–35). ರನ್ನ ಬ್ರಾಹ್ಮಣರ ಬಗ್ಗೆ ಅಷ್ಟೊಂದು ಕಡು ವಿರೋಧಿಯಾಗಿದ್ದರೆ ಇದನ್ನು ಪ್ರಸ್ತಾಪಿಸುವುದನ್ನು ಕೈಬಿಡ ಬಹುದಿತ್ತು. ಹೀಗೆ ಕೈಬಿಡುವುದರಿಂದ ತನ್ನ ಕಾವ್ಯಕ್ಕಾಗಲಿ, ಅರ್ಜುನನ ವ್ಯಕ್ತಿತ್ವ ಕ್ಕಾಗಲಿ ಭರಿಸಲಾರದ ಹಾನಿ ಏನೂ ಆಗುತ್ತಿರಲಿಲ್ಲ. ಇದಲ್ಲದೆ ಅಜಿತಪುರಾಣದಲ್ಲಿಯೂ ಈ ಬಗೆಯ ಗೌರವಪೂರ್ಣವಾದ ಪ್ರಸಂಗಗಳನ್ನು ಗಮನಿಸಬಹುದಾಗಿದೆ. ಇಂಥ

ಸಂದರ್ಭಗಳು ಸಮತೋಲತ್ವವನ್ನು ಕಾಪಾಡಿಕೊಳ್ಳುವುದಕ್ಕಾಗಿಯೇ ತಲೆ ಎತ್ತಿ ನಿಂತಿವೆ ಎಂದು ಹೇಳಬೇಕಾಗುತ್ತದೆ.

ಚಕ್ರವರ್ತಿಯ ಆಸ್ಥಾನವನ್ನು ಸೇರಿದ ರನ್ನ ಅಲ್ಲಿಯ ಕವಿಗಳನ್ನು ಕಂಡು ರೋಸಿ ಹೋಗಿದ್ದಾನೆ. ಇದರಿಂದಾಗಿಯೇ ಪಲವಾರು ಕಡೆಗಳಲ್ಲಿ ರಾಜ-ಕವಿಯ ಸಂಬಂಧ, ಹುರುಳಿಲ್ಲದ ಕವಿಗಳು ಮತ್ತು ಹೆಚ್ಚಿಸಿಕೊಳ್ಳುವ ಒಣ ಪ್ರಚಾರ ಇಂಥವೆಲ್ಲದರ ಬಗ್ಗೆ ನಿರ್ಧಾಕ್ಷಿಣ್ಯವಾಗಿ ಹಳಿದುಬಿಡುತ್ತಾನೆ. (ನೋಡಿ : 1-36, 1-37, 1-49, 1-50, 4-40, 4-42)

> ಕೆಮ್ಮಗೆ ಕೊಳಲಾಟಿಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಜನೊ
> ಪಗೆವನೊ ಮೊಮ್ಮನೊ ಮಗನ ದಾಯಿಗನೋ ಬುಧಸೇವ್ಯ ನಂದನಾ

ನೇರವಾಗಿ ವೈದಿಕ ಅರಸನನ್ನೇ ಉದ್ದೇಶಿಸಿ ಹೇಳುವ ಈ ಮಾತು ಆತನ ಆಸ್ಥಾನದಲ್ಲಿ ಎಂಥವರಿದ್ದರು ಎನ್ನುವುದನ್ನು ಹೇಳುತ್ತದೆ. ಅದಲ್ಲದೆ ಅರಸನಿಗೆ ಸಂಬಂಧಿಸಿದ ಬಂಧುಗಳೂ, ಹೊಗಳುಭಟ್ಟರೂ ಇದ್ದಿರಬಹುದಾದುದರ ಬಗ್ಗೆ ವಿವರಗಳು ದೊರೆಯುತ್ತದೆ. ಇದಕ್ಕಿಂತ ಪರಿಣಾಮಕಾರಿಯಾದ ವಿವರಗಳು ದೊರೆಯುವುದು ಪಿಶಾಚಿಗಳ ಸಂಭಾಷಣೆಯ ಸಂದರ್ಭದಲ್ಲಿ-

> ನವರಕ್ತ ರಕ್ತವಸ್ತ್ರಂ
> ನವಾಂತ್ರ ಯಜ್ಞೋಪವೀತಮೆಸೆಯೆ ಪಿಶಾಚಾ ॥
> ನಿವಹಮನಡಗೂಣೆ ಯೆಂದುನ
> ವೇದವಮಂ ಪೇಟ್ವರಲ್ಲಿ ರಕ್ಕಸಪಾರ್ವರ್ ॥ (4-40)

ಈ ಪದ್ಯದ ಅರ್ಥವನ್ನು ಹೇಳುತ್ತ ಸುಬ್ರಾಯಭಟ್ಟ ಅವರು ಇಂತಹ ಉಪದೇಶವನ್ನು ಮಾಡುತ್ತಿದ್ದ ಬ್ರಾಹ್ಮಣ ರಾಕ್ಷಸರನ್ನು ರನ್ನನು ಅಂದು ಕಣ್ಣಾರೆ ಕಂಡಿರಬಹುದು ಎಂದು ಹೇಳುತ್ತಾರೆ.[1]

> ನವಭೂತ ಭಾಷೆಯಿಂ ಕುಱು
> ಪುಪೇಟ್ದು ತಾಮದ್ದಗವಿತೆಯುಂ ಮಾಡಿ ಮಹಾ
> ವ್ಯವಸಾಯಂಗೆಯ್ವ ಮರು
> ಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ ॥ (4-42)

ಈ ರೀತಿಯ ಮರುಳು ಕವಿಗಳು ಉಪದೇಶ ಬ್ರಾಹ್ಮಣ ರಾಕ್ಷಸರ ನಡುವೆ ಬದುಕದ ರನ್ನ ಇವರೊಂದಿಗೆ ಸಂಘರ್ಷವನ್ನು ಬಲವಾಗಿಯೇ ನಡೆಸಿ ಬದುಕಿರಬಹುದು. ಆದ್ದರಿಂದಲೇ ಆ ಕವಿ-ಕಾವ್ಯ ಪರಿಸರದ ಬಗ್ಗೆ ಇಷ್ಟೊಂದು ಕರಾರುವಕ್ಕಾಗಿ ಪರಿಪರಿಯಾಗಿ ಹೇಳಿದ್ದಾನೆ. ಇಂಥವರ ನಡುವಿದ್ದ ಪ್ರತಿಭಾನ್ವಿತ ರನ್ನ ತನ್ನ ಕಾವ್ಯದ ಬಗ್ಗೆ ನಿರ್ಭೀಥೆಯಿಂದ ಹೇಳಿಕೊಳ್ಳಲು ಸಾಧ್ಯವಾಗಿದೆ.

1 ಗದಾಯುದ್ಧ ದರ್ಪಣಂ : ಪ್ರೊ. ಪಿ. ಸುಬ್ರಾಯ ಭಟ್ಟ-160.

ಹೀಗೆ ರನ್ನ ಪ್ರಸಂಗ ಬಂದಾಗ ಮಾತಿನಲ್ಲೇ ಕೊಚ್ಚಿಹಾಕುತ್ತ, ಮತ್ತೊಮ್ಮೆ ಎತ್ತಿಹಿಡಿಯುತ್ತ ಬಂದಿದ್ದರೂ ಭಾರವಾದ ಒಲವು ಮೊದಲಿನದರಲ್ಲಿಯೇ ಇದೆ. ಇಂಥ ಮನಸ್ಥಿತಿಯ ನಡುವೆಯೂ ರನ್ನ 'ನಾನೇನು ಬ್ರಾಹ್ಮಣರಿಗಿಂತಲೂ ಕಡಿಮೆ ಇಲ್ಲ' ಎಂದು ಹೇಳಿಕೊಳ್ಳುವಂತಿದೆ. ವೈಶ್ಯಕುಲದ ಬಳೆಗಾರ ಜಾತಿಯವನಾದ ರನ್ನ ತನ್ನ ಕಾವ್ಯದ ದೇಶೀಯುತೆ ನುಡಿಗಟ್ಟುಗಳ ಬಗ್ಗೆ ಹೇಳುತ್ತ 'ಬ್ರಹ್ಮ' (ಚತುರ್ಮುಖ) ಎಂದೇ ಕರೆದುಕೊಳ್ಳುತ್ತಾನೆ (1-39) ರನ್ನನಿಗೆ ಚತುರ್ಮುಖನೆಂಬ ಬಿರುದಿದ್ದಾಗಲೂ ಮತ್ತು ಕವಿಗಳನ್ನು ಅಭಿನವ ಬ್ರಹ್ಮರೆಂದು ಕರೆಯುವ ವಾಡಿಕೆ ಇದ್ದಾಗಲೂ, ರನ್ನ ಹೇಳುವಲ್ಲಿ ಇದಷ್ಟೆ ಗಮನದಲ್ಲಿಟ್ಟು ಆ ಪದ ಪ್ರಯೋಗವನ್ನು ಮಾಡಿದಂತಿಲ್ಲ. ಈ ಮೇಲೆ ಹೇಳಿದಂತೆ ಬಳೆಗಾರ ಜಾತಿಯವನಾದ ರನ್ನ ತಾನು ವೈದಿಕರೊಂದಿಗೆ ಸ್ಥಾನ ಹೊಂದಾಣಿಕೆಯನ್ನು ಮಾಡಿಕೊಳ್ಳಲು ಹವಣಿಸಿದ್ದು ಗೊತ್ತಾಗುತ್ತದೆ ಮತ್ತು ತನ್ನ ಕಾವ್ಯದ ಬಗ್ಗೆ ಅಹಂಮಿಕೆಯಿಂದ ಹೇಳಿಕೊಳ್ಳಲು ಸಾಧ್ಯವಾಗಿದೆ.

ಮತಧರ್ಮಗಳ ವಿಚಾರಕ್ಕೆ ಸಂಬಂಧಿಸಿದಂತೆ ರನ್ನನ ಗದಾಯುದ್ಧದಲ್ಲಿಯ ವಿಚಾರಗಳಿಗೂ ಮತ್ತು ಅಜಿತ ಪುರಾಣದಲ್ಲಿಯ ವಿಚಾರಗಳಿಗೂ ವ್ಯತ್ಯಾಸಗಳಿವೆ. ಈ ವ್ಯತ್ಯಾಸಗಳಿಗೆ ರನ್ನನಲ್ಲಿ ಆದ ವಿಚಾರಗಳ ಬದಲಾವಣೆಯೇ ಕಾರಣವೆಂದು ಗುರುತಿಸ ಲಾಗಿದೆ. ಇದಕ್ಕೆ ಅಂದಿನ ರಾಜಕೀಯ ಬದಲಾವಣೆಯ ಜೊತೆಗೆ ಸಾಂಸ್ಕೃತಿಕ ಮತ್ತು ಸಾಮಾಜಿಕ ಬದಲಾವಣೆಗಳು ಗಮನಸೆಳೆಯುವಂಥವಾಗಿವೆ. ಇದೆಲ್ಲಕ್ಕೂ ಪ್ರಧಾನ ವಾಗಿ ರನ್ನನ ಸುತ್ತಲಿರುವ ವ್ಯಕ್ತಿನಿಷ್ಠ ಸಂಬಂಧಗಳನ್ನು ಕಾರಣವಾಗಿವೆ. ಈ ಸಂಬಂಧಗಳು ಕೇವಲ ಮಾನವೀಯ ಸಂಬಂಧಗಳಾಗಿರದೆ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಬಂಧಗಳಾಗಿರುವುದು ಕಂಡುಬರುತ್ತದೆ. ಈ ಸಂಬಂಧಗಳು ರನ್ನನನ್ನು ವೈಚಾರಿಕವಾಗಿ ಬದಲಾಯಿಸಿವೆ ಎಂದು ಗ್ರಹಿಸಿಕೊಳ್ಳುವುದು ಸಮಂಜಸ ವಾಗಲಾರದು ಏಕೆಂದರೆ ಗದಾಯುದ್ಧಕ್ಕಿಂತ ಮುಂಚಿತವಾಗಿಯೇ ಬಂದ ಅಜಿತ ಪುರಾಣದಲ್ಲಿಯ ವರ್ಣ ಮತ್ತು ಮತದ ವಿಚಾರಗಳು ಸ್ಫುಟವಾಗಿಯೇ ಇದ್ದು, ಇದಕ್ಕಿಂತಲೂ ಖಚಿತವಾಗಿ, ಸ್ಪಷ್ಟವಾಗಿ ಮತ್ತು ನೇರವಾಗಿ ಗದಾಯುದ್ಧದಲ್ಲಿ ವ್ಯಕ್ತವಾಗಿವೆ.

ಗದಾಯುದ್ಧದಲ್ಲಿ ಬ್ರಾಹ್ಮಣರ ಕುರಿತು ಇರುವ ನಿಲುವುಗಳು ಅಜಿತ ಪುರಾಣ ದಲ್ಲಿ ನೇರವಾಗಿ ದಾಖಲಾಗದಿರಲು ರನ್ನನಿಗೆ ಪೂಜ್ಯರಾದ ಮೂಲ ಬ್ರಾಹ್ಮಣ ವಂಶದಿಂದ ಬಂದ[1] ಅತ್ತಿಮಬ್ಬೆಯೇ ಪ್ರಧಾನ ಕಾರಣವೆನಿಸುತ್ತದೆ. ಹೀಗಾಗಿ ಬ್ರಾಹ್ಮಣರ ಮೇಲೆ ರನ್ನ ನೇರವಾಗಿ ಹರಿಹಾಯುವುದಿಲ್ಲ. ಆದರೆ ತನ್ನ ಕಥನ ಕೌಶಲ್ಯದಲ್ಲಿ ಹೀಗೆ ಹರಿಹಾಯದೇ ಬಿಟ್ಟಿಲ್ಲ.

---

1 ಅತ್ತಿಮಬ್ಬೆಯ ಅಜ್ಜ (ತಂದೆಯ ತಂದೆ) ನಾಗಮಯ್ಯ ಬ್ರಾಹ್ಮಣನಾಗಿದ್ದ ಎನ್ನುವುದನ್ನು ಈಗಾಗಲೇ ಅಧ್ಯಯನಕಾರರು ಸ್ಪಷ್ಟಪಡಿಸಿದ್ದಾರೆ.

ಅಜಿತಪುರಾಣದ ಆರಂಭದಲ್ಲಿಯೇ 'ಕುತೀರ್ಥ' (ಹೀನಧರ್ಮ) 'ಭವ್ಯಪ್ರಸರ' (ಜೈನಧರ್ಮ) ಎಂದು ವರ್ಗೀಕರಿಸುವ ರನ್ನ, ಅನಂತರ ಅತ್ತಿಮಬ್ಬೆಯ ಚರಿತದ ಪ್ರವೇಶದಲ್ಲಿ ಮಲ್ಲಪ್ಪ ಮತ್ತು ಪೊನ್ನಮಾರ್ಯ ಸಹೋದರರ ಗುಣಗಾನ ಮಾಡುವ ಸಂದರ್ಭ ಗಮನಾರ್ಹವಾದುದು. ಚಕ್ರವರ್ತಿಗಳನ್ನು, ಸಾಮಂತರನ್ನು ದೇವಾನು ದೇವತೆಗಳೊಂದಿಗೆ ಹೋಲಿಸಿ ಅಥವಾ ಅವರ ಸ್ಥಾನಗಳನ್ನು ಪಲ್ಲಟಗೊಳಿಸಿ ನಿರೂಪಿ ಸುವುದು ಜೈನ ಕವಿಗಳಲ್ಲಿ ಸಾಮಾನ್ಯ. ಹಾಗೆಯೇ ರನ್ನ ಜೈನ ಸಹೋದರರಿಗೆ ವೈದಿಕ ಮಹಾಭಾರತದ ಹಾಗೂ ರಾಮಾಯಣದ ನಾಯಕ ಪಾತ್ರಗಳಾದ ಭೀಮಾರ್ಜುನರು ಮತ್ತು ರಾಮಲಕ್ಷ್ಮಣರಿಗೆ ಹೋಲಿಸಿ (2–8) ಕೀಳಾಗಿ ಕಂಡುದನ್ನು ಗಮನಿಸಬಹುದು. ಇದಕ್ಕಿಂತಲೂ ಮುಖ್ಯವಾಗಿ ಗುರುತಿಸಿಕೊಳ್ಳುವ ವಿಷಯವೆಂದರೆ 'ಅವರೊಳಪ್ರತಿಮ ವಿಪ್ರಕುಲದೀಪನಂ' (2–9, 511) ಎಂದು ಹೇಳುವ ಸಂದರ್ಭ ವನ್ನು ಗಮನಿಸಿದರೆ ಜೈನಧರ್ಮಕ್ಕೆ ಮತಾಂತರಗೊಂಡ ಬ್ರಾಹ್ಮಣರು 'ಜೈನ'ರೆಂದು ಕರೆಯಿಸಿಕೊಳ್ಳದೆ 'ಬ್ರಾಹ್ಮಣ ಜೈನ'ರೆಂದು ಕರೆಯಿಸಿಕೊಳ್ಳುವ ವಾಡಿಕೆ ಇದ್ದಿರ ಬಹುದೆನಿಸುತ್ತದೆ.

ಅಜಿತಪುರಾಣದಲ್ಲಿ ರನ್ನ ವರ್ಣವಿಚಾರದ ಬಗ್ಗೆ ಲಗ್ಗೆ ಹಾಕುವ ಪ್ರವೃತ್ತಿಯನ್ನು ತೋರುವುದಿಲ್ಲ ಎನ್ನುವುದು ಸಾಮಾನ್ಯ ಗ್ರಹಿಕೆ. ಆದರೆ ಈ ಗ್ರಹಿಕೆ ಮೇಲ್ಪದರಿನ ದಾಗಿದೆ. ಅಜಿತಪುರಾಣದಂತಹ ಕೃತಿಯ ವಸ್ತುವಿನ ಆಯ್ಕೆಯನ್ನು ರನ್ನ ಏಕೆ ಮಾಡಿಕೊಂಡ ಎನ್ನುವ ಪ್ರಶ್ನೆಯ ಹಿಂದೆ ಮೇಲಿನ ಗ್ರಹಿಕೆಯನ್ನು ಸುಳ್ಳಾಗಿಸುವಂತಹ ಉತ್ತರವಿದೆ. ಮತ್ತು ಬ್ರಾಹ್ಮಣರನ್ನು ಆತ ಕಾಣುವ ದೃಷ್ಟಿಕೋನ ಎಂತಹುದು ಎನ್ನುವುದು ಈ ಮೇಲಿನ ವಿಚಾರದಿಂದ ಸ್ಪಷ್ಟವಾಗುತ್ತದೆ.

ಭಗವತ್ ಜಿನಸೇನಾಚಾರ್ಯ ಹಾಗೂ ಅವರ ಶಿಷ್ಯನಾದ ಗುಣಭದ್ರಾಚಾರ್ಯ ರಿಂದ ರೂಪುಗೊಂಡ 'ಮಹಾಪುರಾಣ'ದಿಂದ ಪಂಪ 'ಆದಿಪುರಾಣ'ದ ವಸ್ತುವನ್ನು ಆಯ್ದುಕೊಂಡ. ರನ್ನನಿಗೆ ಪಂಪ ಆಯ್ದುಕೊಂಡದ್ದನ್ನು ಬಿಟ್ಟು, ಉತ್ತರ ಪುರಾಣ ವನ್ನು ತನ್ನ ಧಾರ್ಮಿಕ ಕಾವ್ಯಕ್ಕೆ ವಸ್ತುವಾಗಿ ಆಯ್ದುಕೊಂಡ ಎಂದು ಹೇಳಿದರೆ ಅದು ತುಂಬಾ ಸರಳೀಕೃತ ಉತ್ತರವಾಗುತ್ತದೆ.

ರನ್ನನ ಅಜಿತಪುರಾಣದಲ್ಲಿ ತುಂಬಾ ಹೆಸರುವಾಸಿಯಾದ ಸಂದರ್ಭಗಳೆಂದರೆ ವೈರಾಗ್ಯದ ಪ್ರಸಂಗಗಳು ಮತ್ತು ಸಗರನ ಕಥೆ. ಅದರಲ್ಲೂ ಈ ಕಥೆಯಲ್ಲಿ ಬರುವ ಕಪಟ ಬ್ರಾಹ್ಮಣನ ಪ್ರಸಂಗ ತುಂಬಾ ಕುತೂಹಲಕಾರಿ. ಪಂಪ ತನ್ನ ವಿಕ್ರಮಾರ್ಜುನ ವಿಜಯದಂತಹ ಕೃತಿಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಂಡರೂ ಆದಿ ಪುರಾಣಕ್ಕೆ ಆ ಲವಲವಿಕೆ ದಕ್ಕಲಿಲ್ಲ. ಆದರೆ ರನ್ನ ಗದಾಯುದ್ಧದಲ್ಲಿ ತೋರಿದಂತೆ ಅಜಿತಪುರಾಣದಲ್ಲಿಯೂ ತನ್ನ ಬುದ್ಧಿಯ ಹೊಳಪನ್ನು, ಕೈಚಳಕವನ್ನೂ, ತೋರಿಸಿ

ದ್ದಾನೆ. ಹೀಗೆ ಬದಲಾವಣೆಗಳನ್ನು ಮಾಡಿಕೊಂಡು ಬಂದ ಪ್ರಸಂಗಗಳೇ ಆತನ ವರ್ಣ ವಿಚಾರವನ್ನು ಸ್ಪಷ್ಟಪಡಿಸಲು ಸಮರ್ಥವಾದ ಆಕರಗಳಾಗುತ್ತವೆ.

ಬ್ರಾಹ್ಮಣ ವೇಷಧಾರಿಯಾದ ಮಣಿಕೇತು ಸಗರ ಅರಸನಲ್ಲಿಗೆ ಬಂದಾಗ ತನ್ನ ಸಮಸ್ಯೆಯನ್ನು ನಿವೇದಿಸುವ ಪ್ರಸಂಗ ಮತ್ತು ಆ ಬ್ರಾಹ್ಮಣನಿಗೆ ಪುರೋಹಿತ ಉಪದೇಶ ಮಾಡುವ ಪ್ರಸಂಗ ಇಲ್ಲಿ ತುಂಬಾ ಮುಖ್ಯವೆನಿಸುತ್ತವೆ. ಉತ್ತರ ಪುರಾಣದಲ್ಲಿ ಈ ಎರಡು ಪ್ರಸಂಗಗಳಿದ್ದರೂ, ಮೊದಲ ಪ್ರಸಂಗದಲಿ ನಿವೇದಿಸುವ ಹಾಗೂ ನಿರೂಪಿಸುವ ವಿಧಾನಗಳು ಭಿನ್ನವಾಗಿವೆ. ಹಾಗೆಯೇ ಉತ್ತರ ಪುರಾಣದಲ್ಲಿ ಸಗರನೇ ಕಪಟ ಬ್ರಾಹ್ಮಣನಿಗೆ ಉಪದೇಶ ಮಾಡಿದರೆ ರನ್ನ ಕೃತಿಯಲ್ಲಿ ಪುರೋಹಿತ ಕಪಟ ಬ್ರಾಹ್ಮಣನಿಗೆ ಉಪದೇಶ ಮಾಡುತ್ತಾನೆ. ಮೊದಲನೆಯ ಪ್ರಸಂಗಕ್ಕಿಂತ ಎರಡನೆಯ ಪ್ರಸಂಗದಲ್ಲಾದ ಬದಲಾವಣೆ ಮತ್ತು ಔಚಿತ್ಯದ ಕುರಿತು ವಿದ್ವಾಂಸರು ಚರ್ಚಿಸಿದ್ದಾರೆ.[1] ಆದರೆ ಈ ಚರ್ಚೆ ವರ್ಣವ್ಯವಸ್ಥೆಯ ಹಿನ್ನೆಲೆಯಲ್ಲಿ ಗಮನಿಸಿಲ್ಲ. ಆದರೆ ಈ ವಿಚಾರದ ಹಿನ್ನೆಲೆಯಲ್ಲಿ ಗಮನಿಸಿದಾಗ ಅಲ್ಲಿ ಹೊರಡುವ ಅರ್ಥವೇ ಬೇರೆಯಾಗುತ್ತದೆ. ಸಗರ ಅರಸು ಉಪದೇಶವನ್ನು ಮಾಡದೆ ಪುರೋಹಿತ ಉಪದೇಶವನ್ನು ಮಾಡುವುದರಿಂದ ಆಗುವಪರಿಣಾಮಗಳೆಂದರೆ—

1. ಪುರೋಹಿತ ಮತ್ತು ಕಪಟ ಬ್ರಾಹ್ಮಣನೆಂಬ ವೈದಿಕರ ನಡುವೆ ಸಗರ ಅರಸು ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಾಗುತ್ತಾನೆ.

2. ಕಪಟ ಬ್ರಾಹ್ಮಣನಿಗೆ ಉಪದೇಶಿಸುವಾಗ ಗೇಲಿ ಮಾಡುವ ಸಂದರ್ಭದಿಂದ ಸಗರ ಅರಸನನ್ನು ಉಳಿಸಿ ಗಂಭೀರವಾದ ವ್ಯಕ್ತಿತ್ವವನ್ನು ರನ್ನ ತಂದುಕೊಡುತ್ತಾನೆ. ಈ ಇಬ್ಬರ ಸಂವಾದದಲ್ಲಿ ವೈದಿಕ ತತ್ತ್ವವನ್ನು ಗೇಲಿ ಮಾಡಿದಂತಾಗಿದೆ.

3. ಕಪಟ ಬ್ರಾಹ್ಮಣ ಮತ್ತು ಪುರೋಹಿತರ ನಡುವಿನ ಪ್ರಸಂಗದ ನಿರೂಪಣ ತಂತ್ರ 'ಇವರನಿವರ ನುಡಿಯೊಳ್ ತೊಡರ್ಚುವೆನ್' (8–25–ವ 11) ಎನ್ನುವುದು ಮುಳ್ಳನ್ನು ಮುಳ್ಳಿನಿಂದಲೇ ತೆಗೆದಂತೆ ಮಾಡಿದ್ದಾನೆ ಎಂದು ಹೇಳಲೂ ಸಾಧ್ಯವಿದೆ. ಹಾಗೆಯೇ ಇಬ್ಬರು ವೈದಿಕರ ಕದನದಲ್ಲಿ ಮೂರನೆಯವ ಗಿಟ್ಟಿಸಿಕೊಂಡ ಸಂಪತ್ತು ಎಂದು ಆಗುತ್ತದೆ.

---

1 ಅಜಿತಪುರಾಣ ತಿಲಕಂ : ಸಂ. ಪ. ನಾಗರಾಜಯ್ಯ-34 ಮತ್ತು 178

ಇದಲ್ಲದೆ ಈ ಬ್ರಾಹ್ಮಣನ ಕಥೆಯಲ್ಲಿಯೇ ಅಡಗಿರುವ ವ್ಯಂಗ್ಯವನ್ನು ತುಂಬಾ ಗಂಭೀರವಾಗಿಯೇ ಪರಿಗಣಿಸಬೇಕು.

ಶರಣಾಗಾ ದ್ವಿಜನೆನ್ನಂ
ಕರುಣಿಸು ನೀನೆನ್ನ ಮಗನನಂತಕ ಪುರದಿಂ
ತರವೇಳ್ಬುದೆನಗೆ ಮರಣಂ
ಶರಣಂ ಮೇಣೆನಿತೆ ನಿನ್ನ ಚರಣಂ ಶರಣಂ (8-12)

ನಾನು 'ಬ್ರಾಹ್ಮಣನಾಗಿದ್ದೇನೆ' ಎಂದು ಹೇಳಿಕೊಳ್ಳುವ ಕಪಟ ಬ್ರಾಹ್ಮಣ 'ದ್ವಿಜನೆನ್ನಂ' ಎನ್ನುವಲ್ಲಿ 'ನಾನು ಬ್ರಾಹ್ಮಣನಾಗಿರುವುದರಿಂದ' ಎನ್ನುವ ಧ್ವನಿಯೂ ಹೊರಡುತ್ತದೆ. ಅರಸನಾದವನು ಬ್ರಾಹ್ಮಣನ ಮಗ ಸತ್ತರೂ ಉಳಿಸಿಕೊಡಬೇಕು ಎನ್ನುವ ವೈದಿಕ ತತ್ತ್ವವನ್ನೇ ಇಲ್ಲಿ ವಿಡಂಬಿಸಲಾಗಿದೆ.

ಕುಲಜಂ ಕುಲಹೀನನಿವಂ
ಕಲಿಪಂದೆಯಿವಂ ಮಹಾಭಿಮಾನಿಯಿವಂ ನಾ
ಣಿಲಿಯಿವನೆನ್ನದೆ ಪಲರಂ
ನಲಿನಲಿದಾಟಂದು ಕೊಂದಪಂ ಯಮರಾಜಂ (8-21)

ಎನ್ನುವಲ್ಲಿ ಮೇಲಿನ ವಿಚಾರ ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲದೆ ಈ ಮೇಲಿನ ಪದ್ಯದಲ್ಲಿಯ ಉಪದೇಶವನ್ನು ಅರಸನಿಂದ ಕೊಡಿಸದೆ ಪುರೋಹಿತನಿಂದ ಕೊಡಿಸಿರುವುದರಿಂದ ಮುಳ್ಳನ್ನು ಮುಳ್ಳಿನಿಂದಲೇ ತೆಗೆದಂತಾಗಿದೆ.

ರನ್ನ ಬ್ರಾಹ್ಮಣ ಕುಲದ ಬಗ್ಗೆ ಎಲ್ಲಿಯೂ ವಾಚ್ಯವಾಗಿ ಏನನ್ನೂ ಹೇಳದೆ ಪಾತ್ರಗಳ ಮೂಲಕ ತನ್ನಲ್ಲಿರುವ ಒಳ ಆತಂಕವನ್ನು ಹೇಳುವುದಕ್ಕೆ ಹೋಗಿದ್ದಾನೆ. ಇದು ಸಂಪೂರ್ಣವಾಗಿ ಜಾಣತನದ ಲಕ್ಷಣವಾಗಿದೆ. ಆದರೆ ಇದೇ ಗುಣ ಗದಾಯುದ್ಧದಲ್ಲಿ ನಮಗೆ ಗೋಚರವಾಗದೆ ನೇರವಾಗಿ ಅಲ್ಲಲ್ಲಿ ಹರಿಹಾದ ಪ್ರಸಂಗಗಳು ಲಭ್ಯವಾಗುತ್ತವೆ.

ರಾಮಾಯಣದ ಉತ್ತರಕಾಂಡದಲ್ಲಿಯ ಶಂಬೂಕನ ಕಥೆಯನ್ನು ಮೂಲವಾಗಿಸಿಕೊಂಡು ಬಂದಿರಬಹುದಾದ ಈ ನರಲಿ ಬ್ರಾಹ್ಮಣನ ಪ್ರಸಂಗ ಗುಣಭದ್ರಾಚಾರ್ಯನ ಉತ್ತರ ಪುರಾಣದಲ್ಲಿ ಇದೆ. ಇಲ್ಲಿ ಮತ್ತು ರನ್ನನ ಕೃತಿಯಲ್ಲಿ ಕಥೆಯನ್ನು ಹೇಳುವುದಕ್ಕೆ ಹಾಗೂ ಬಳಸುವುದಕ್ಕೆ ಇರುವ ಕೆಲ ಉದ್ದೇಶಗಳು ಭಿನ್ನವಾಗಿರುವುದು ಕಂಡುಬರುತ್ತವೆ. ಉತ್ತರ ಪುರಾಣದಲ್ಲಿಯ ಸಗರ ಅರಸನ ಉಪದೇಶಕ್ಕೂ ಮತ್ತು ಅಜಿತಪುರಾಣದಲ್ಲಿಯ ಪುರೋಹಿತನ ಉಪದೇಶಕ್ಕೂ ಒಡೆದು ಕಾಣುವ ವ್ಯತ್ಯಾಸಗಳಿವೆ.

ಈ ವ್ಯತ್ಯಾಸಕ್ಕೆ ಪ್ರಮುಖ ಕಾರಣ ರನ್ನ ಬೌದ್ಧಧರ್ಮಕ್ಕೆ ಸಂಬಂಧಿಸಿದ ಕಿಸಾ ಗೋತಮಿಯ ಕಥೆಯನ್ನು ಬಳಸಿಕೊಂಡಿರುವುದೇ ಆಗಿದೆ. ಈ ಪ್ರಸಂಗದಲ್ಲಂತೂ ವಿಡಂಬನೆಯೇ ಪ್ರಧಾನವಾಗಿದ್ದರೂ ಕೊನೆಯಲ್ಲಿ 'ಆಗೋದೆಲ್ಲ ಒಳ್ಳೆಯದಕ್ಕೆ' ಎನ್ನುವಂತೆ ಕಪಟ ವೇಷಧಾರಿಯಾದ ಮಣಿಕೇತುವಿಗೆ ಮುಕ್ತಕಂಠದಿಂದ ಹೊಗಳಿದ ರೆಂದು ಹೇಳುತ್ತಾನೆ. 'ಇಷ್ಟಂ ಧರ್ಮೇಣ ಯೋಜಯೇತ್' (8-52,511) ಎಂದೂ ಹೇಳುತ್ತಾನೆ.

ಮೇಲಿನ ಈ ವಿವರವಾದ ವಿಷಯವನ್ನು ಗಮನಿಸಿದ ನಂತರ, ರನ್ನ ಈ ಉತ್ತರ ಪುರಾಣವನ್ನು ಏಕೆ ಆಯ್ಕೆ ಮಾಡಿಕೊಂಡ ಎನ್ನುವುದನ್ನು ಬಿಚ್ಚಿಡುವುದು ಕಷ್ಟದ ಕೆಲಸವೇನಲ್ಲ. ಹಾಗೆಯೇ ಬ್ರಾಹ್ಮಣ ಮೂಲದ ಪಂಪ ಆದಿಪುರಾಣಕ್ಕೆ ಪೂರ್ವ ಪುರಾಣವನ್ನು ಏಕೆ ಆಯ್ಕೆಮಾಡಿಕೊಂಡ ಎನ್ನುವುದನ್ನು ಅಪ್ರತ್ಯಕ್ಷವಾಗಿ ಊಹಿಸಲು ಸಾಧ್ಯವಾಗುತ್ತದೆ. ಇದರ ಅರ್ಥ ಈ ವರ್ಣ ವಿಚಾರವೇ ವಸ್ತುವಿನ ಆಯ್ಕೆಗೆ ಮಾನದಂಡವಾಗಿದೆ ಎನ್ನುವುದಲ್ಲ. ಇದೂ ಒಂದು ಪ್ರಮುಖ ಕಾರಣ ಎನ್ನುವುದನ್ನು ಲಕ್ಷಿಸಬೇಕು.

ಜಾತಿ ವಿಷಯಕ್ಕೆ ಸಂಬಂಧಿಸಿದಂತೆ ರನ್ನ, ಈ ಮೇಲೆ ಚರ್ಚಿಸಲಾದ ಎರಡೂ ಕಾವ್ಯಗಳಲ್ಲಿ ನೇರವಾಗಿ ಎಲ್ಲಿಯೂ ಹೇಳಿರುವುದು ಕಂಡುಬರುವುದಿಲ್ಲ. ಆದರೆ ಅಲ್ಲಲ್ಲಿ ಉಲ್ಲೇಖಿತವಾದ ಜಾತಿಯ ವಿಚಾರಗಳನ್ನು ಗಮನಿಸಿದರೆ[1], ಜಾತಿಯನ್ನು ಸಾಮಾನ್ಯೀ ಕರಣಗೊಳಿಸಿ ಹೇಳುವುದು ಕಂಡುಬರುತ್ತದೆ. ಐದು ಮದಗಳಲ್ಲಿ ಕುಲ ಮತ್ತು ಜಾತಿ ಇವು ಎರಡನ್ನು ಗುರುತಿಸುತ್ತಾನೆ. ಆದರೆ ವಿಶೇಷವಾದ ಆದ್ಯತೆಯನ್ನು ಕೊಟ್ಟು ವಿವರಿಸುವುದಾಗಲಿ, ಚರ್ಚಿಸುವುದಕ್ಕಾಗಲಿ ಇಳಿಯುವುದಿಲ್ಲ. ಹೀಗಾಗಲು ಮುಖ್ಯ ಕಾರಣ ರನ್ನ ವೈಶ್ಯವರ್ಣಕ್ಕೆ ಸಂಬಂಧಿಸಿರುವುದೇ ಆಗಿದೆ. ತಾನೂ ಸಂಪೂರ್ಣವಾಗಿ ಕೆಳವರ್ಣದವನೂ ಅಲ್ಲದ್ದರಿಂದ ಹಾಗೂ ಸಂಪೂರ್ಣ ಮೇಲು ವರ್ಣಕ್ಕೆ ಸಂಬಂಧ ಪಡದವನಾಗಿರುವುದರಿಂದ 'ಜಾತಿ' ಎನ್ನುವುದು ರನ್ನನಿಗೆ ಅಷ್ಟಾಗಿ ಕಾಡಲು ಸಾಧ್ಯವಾಗಿಲ್ಲ. ಹೀಗಾಗಿ ರನ್ನನಿಗೆ ಮೇಲು ಜಾತಿಯವರೊಂದಿಗೆ ಸ್ಥಾನ ಹೊಂದಾಣಿಕೆ ಮಾಡಿಕೊಳ್ಳುವ ಮನೋಭಾವನೇ ಕೇಂದ್ರವಾಗಿರುವುದರಿಂದ ಜಾತಿಯ ಬಗ್ಗೆ ಮಾತ ನಾಡದೇ ಮೌನವಾಗಿರುವುದು ಆಶ್ಚರ್ಯಕರವಾದ ವಿಷಯವೇನಲ್ಲ.

---

1 ವಿವರಕ್ಕೆ ನೋಡಿ: 8—21, 8—8.

# ದಲಿತ ಸಾಹಿತ್ಯದ ತಾತ್ತ್ವಿಕ ನೆಲೆಯಲ್ಲಿ ಪಾಶ್ಚಾತ್ಯ ನೀಗ್ರೊ ಸಾಹಿತ್ಯ : ಕೆಲವು ತೌಲನಿಕ ವಿಚಾರಗಳು

ಡಾ. ಮ.ನ. ಜವರಯ್ಯ

೧

ಅಸ್ಪೃಶ್ಯತೆಯ ಗುಲಾಮಗಿರಿಯಿಂದ ಬಂದ ಕೆಲವು ದಲಿತ ಲೇಖಕರ ಅಭಿವ್ಯಕ್ತಿಗಳನ್ನು ಅದರ ತಾತ್ತ್ವಿಕ ನೆಲೆಯಲ್ಲಿ ವರ್ಣವಿದ್ವೇಷದ ಗುಲಾಮಗಿರಿಯಿಂದ ಬಂದ ಕೆಲವು ಕಪ್ಪು ಲೇಖಕರ ಅಭಿವ್ಯಕ್ತಿಗಳೊಡನೆ ಇಟ್ಟು ಸ್ಥೂಲವಾದ ಒಂದು ತೌಲನಾತ್ಮಕ ವಿವೇಚನೆಯನ್ನು ನಡೆಸುವುದು ಈ ಅಧ್ಯಾಯದ ಉದ್ದೇಶವಾಗಿದೆ. ಹಾಗೆ ಮಾಡುವುದರ ಮೂಲಕ ಈ ಎರಡು ಜನಾಂಗಗಳು ಧರೆಯ ಮೇಲಣ ಮಾನವ ನಾಗರೀಕತೆ ಮತ್ತು ಸಂಸ್ಕೃತಿಯ ನೆಲೆಗಳಲ್ಲಿ ತಮ್ಮ ಇರುವಿಕೆಯ ಛಾಪುಗಳನ್ನು ಹೇಗೆ ಮೂಡಿಸಿದ್ದಾರೆ ಎಂಬುದನ್ನೂ, ತನ್ಮೂಲಕ ಲೋಕ ಸಾಹಿತ್ಯವು ಬಹುಕಾಲದವರೆಗೂ ಕಾಣದೇ ಇದ್ದ ಒಂದು ಅಜ್ಞಾತ ಜನವರ್ಗದ ವಿನೂತನ ಅನುಭವಗಳನ್ನು ಶಬ್ದ ಕಲೆಯಲ್ಲಿ ಕಾಣಲು ಹೇಗೆ ಸಾಧ್ಯವಾಗಿದೆ ಎಂಬುದನ್ನು ಗುರುತಿಸಿಕೊಳ್ಳುವುದು ಕೂಡ ಈ ಅಧ್ಯಾಯದ ಮುಖ್ಯ ಉದ್ದೇಶಗಳಲ್ಲಿ ಒಂದಾಗಿದೆ. ಜೊತೆಗೆ ವರ್ಣವಿದ್ವೇಷ ಹಾಗೂ ಗುಲಾಮಗಿರಿಗಳು ಸೃಜನಶೀಲ ಪಾಶ್ಚಾತ್ಯ ಸಾಹಿತ್ಯದಲ್ಲಿ ಎಲ್ಲಿಯಾದರೂ ಸಮರ್ಥನೆಯನ್ನು ಪಡೆದಿರಲಿಕ್ಕೆ ಸಾಧ್ಯವೆ ಎಂಬುದನ್ನು ಕಾಣಲೆತ್ನಿಸುವುದು ಕೂಡ, ಪ್ರಸ್ತುತ ಔಚಿತ್ಯಪೂರ್ಣವೂ ಕುತೂಹಲದ ಸಂಗತಿಯೂ ಆಗಿದೆ ಎಂದೆನಿಸುತ್ತದೆ. ಹೀಗೆಯೇ, ಇನ್ನೂ ಒಂದೆರಡು ಸಾಮಾನ್ಯ ಮಾಹಿತಿಗಳನ್ನು ಪರಿಚಯ ಮಾಡಿಕೊಂಡ ಬಳಿಕ ನಮ್ಮ ಮುಖ್ಯ ವಿಷಯವನ್ನು ಪ್ರವೇಶಿಸಬಹುದಾಗಿದೆ.

ಭೌಗೋಳಿಕವಾಗಿ ವಿಚಾರ ಮಾಡುವಾಗ ಪ್ರಪಂಚದ ಹಲವಾರು ಖಂಡಗಳಲ್ಲಿ ನೀಗ್ರೋ ಗುಲಾಮಗಿರಿಯನ್ನು ಕಾಣಬಹುದಾಗಿದೆ. ಯೂರೋಪು ಖಂಡದಲ್ಲಾಗಲಿ, ದಕ್ಷಿಣ ಆಫ್ರಿಕಾ, ಉತ್ತರ ಅಮೆರಿಕ ಮತ್ತು ದಕ್ಷಿಣ ಅಮೆರಿಕಾಗಳಲ್ಲಿ ನೀಗ್ರೋ ಗುಲಾಮರ ಸಂಸ್ಕೃತಿ ಹಾಗೂ ಸಾಹಿತ್ಯದ ಸ್ಪಷ್ಟವಾದ ಚಿನ್ಹೆಗಳನ್ನೇ ಕಾಣಬಹುದಾಗಿದೆ. ಹಾಗೆ ನೋಡಿದರೆ ಏಷ್ಯಾ ಖಂಡದಲ್ಲಿ ಮಾತ್ರ ನೀಗ್ರೊ ಅಥವಾ ಕಪ್ಪು ಸಂಸ್ಕೃತಿಯನ್ನು ಅಷ್ಟಾಗಿ ಕಾಣಲಾಗುವಂತಿಲ್ಲ. ಬಹುಶಃ ಈ ಬಗೆಯ ಸಾಮಾನ್ಯ ಸಂಗತಿಗಳೇನೇ ಇದ್ದರೂ ವಿಶ್ವದ ಕಪ್ಪು ಸಾಹಿತ್ಯ ಮತ್ತು ಸಂಸ್ಕೃತಿಯ ಇತಿಹಾಸವನ್ನು ಅಧ್ಯಯನ ಮಾಡುವಾಗ ಮನದಾಳದಲ್ಲೆಲ್ಲೊ ಮೂಡಿ ನಿಂತು ಗಮನವನ್ನು ಸೆಳೆದುಕೊಳ್ಳುವ ಒಂದು ಸಂಗತಿಯೆಂದರೆ, ಅಸ್ಪೃಶ್ಯರಂತೆ ನೀಗ್ರೊ ಕಪ್ಪು ಜನರಿಗೆ ಆಲೋಚನೆಯ

ಬಂಧನವಿರಲಿಲ್ಲ : ಅಕ್ಷರ ಸಂಸ್ಕೃತಿಯನ್ನು ರೂಢಿಸಿಕೊಳ್ಳುವುದು ಅವರಿಗೆ ಅಪರಾಧವಾಗಿರಲಿಲ್ಲ ; ಅಭಿವ್ಯಕ್ತಿಯ ಹಾದಿಯಲ್ಲಿ ಅವರಿಗೆ ಅಡೆ-ತಡೆಗಳಿರಲಿಲ್ಲ. ಅಂತೆಯೇ, ತಮ್ಮ ಜೀವನ ಸಂಸ್ಕೃತಿಯನ್ನೂ, ತಮ್ಮ ಜನಪದ ರೀತಿ-ರಿವಾಜುಗಳನ್ನೂ ಸಮುದಾಯ ಬದುಕಿನ ನಡೆ-ನಂಬಿಕೆಗಳನ್ನೂ ಶಬ್ದ ಮಾಧ್ಯಮದಲ್ಲಿ ಅವರು ಹರಿಯುಬಿಡುವುದು ಇಡೀ ಪಾಶ್ಚಾತ್ಯ ಸಂಸ್ಕೃತಿಯಲ್ಲೂ, ನಾಗರೀಕತೆಯಲ್ಲೂ ಹಾಸುಹೊಕ್ಕಾಗಿ ಹಾದು ಬಂದಿರುವುದು ಪಾಶ್ಚಾತ್ಯ ಸಾಹಿತ್ಯ ಚರಿತ್ರೆಯಿಂದ ತಿಳಿದುಬರುತ್ತದೆ. ಅತ್ಯಂತ ಪ್ರಾಚೀನ ಕಾಲದಿಂದಲೂ ಗುಲಾಮಗಿರಿಯ ಕಾರಣದಿಂದಲೇ ಕಪ್ಪು ಜನರಲ್ಲಿ ಚಿಗುರಿದ ಸಾಹಿತ್ಯಾಸಕ್ತಿ ಅನಂತರದ ತಲೆತಲೆಮಾರುಗಳ ಮೂಲಕ ಅದು ಹೇಗೆ ಹಲವು ಕಾಲಘಟ್ಟಗಳಲ್ಲಿ ಹಾದು ಬಂದಿದೆ ಎಂಬುದನ್ನು ಚರಿತ್ರೆಯ ಕೆಲವು ನಿದರ್ಶನಗಳಿಂದ ಕಾಣಬಹುದಾಗಿದೆ. ಅಂದರೆ ಅವರ ಮೇಲಣ ಗುಲಾಮಗಿರಿಯೇ ಹೇಗೆ ಅವರ ಸೃಜನಶೀಲ ಕ್ರಿಯೆಗೆ ಒಂದು ರೀತಿಯ ಮೂಲ ಪ್ರಚೋದನೆಯಾಗಿ ಪರಿಣಮಿಸಿದೆ ಎಂಬುದನ್ನು ತಿಳಿಯಬಹುದಾಗಿದೆ. ಅಂತಲೇ ನೀಗ್ರೊ ಗುಲಾಮರಲ್ಲಿನ ಸಾಹಿತ್ಯಕ ಪ್ರತಿಭೆಯ ಬಗೆಗೆ ಪ್ರಪಂಚದ ಪ್ರಖ್ಯಾತ ಚರಿತ್ರೆಗಾರನಾದ ಆರ್. ಎಚ್. ಬೇರೋ ಹೀಗೆ ಬರೆಯುತ್ತಾನೆ "ಕೇವಲ ಹೊರನೋಟಕ್ಕೆ ಗೋಚರಿಸುವ ಕಾರಣಗಳಿಗಾಗಿ ಮಾತ್ರವಲ್ಲದೆ ಸಾಹಿತ್ಯಕ ಆಸಕ್ತಿಯ ಕಾರಣಗಳಿಂದ ನೋಡಿದಾಗಲೂ ತುಂಬಾ ತೀವ್ರವಾಗಿ ಮನಸೆಳೆಯುವ ಸಂಗತಿ ಎಂದರೆ ಶ್ರೀಮಂತ ಕುಟುಂಬಗಳಿಗೆ ಸೇರಿದ ನೀಗ್ರೊ ಗುಲಾಮರಿಗೆ ಸಾಹಿತ್ಯ ಮತ್ತು ಕಲೆಗಳಲ್ಲಿ ವಿಶೇಷ ಪ್ರಶಿಕ್ಷಣವನ್ನು ಕೊಡಲಾಗುತಿತ್ತು. ಸೆನೆಡಾ ಎಂಬ ಲೇಖಕ ಹೇಳುವಂತೆ, ಕ್ಲಾವಿಸೀಸ್ ಸಬನಸ್ ಎಂಬ ಮಾಲೀಕನ ಮನೆಯಲ್ಲಿ ಒಟ್ಟು ಹನ್ನೊಂದು ಜನ ಗುಲಾಮರಿದ್ದು, ಅವರೆಲ್ಲರಿಗೂ ಹೋಮರ್‌ನ ಇಡೀ ಮಹಾಕಾವ್ಯವನ್ನು ಕಂಠ ಪಾಠ ಮಾಡಿಸಿ ಅದನ್ನವರು ನಿರರ್ಗಳವಾಗಿಯೂ ಸುಬೋಧಪೂರ್ವಕವಾಗಿಯೂ ಹಾಡುತ್ತಿದ್ದರಂತೆ. ಹಾಗೆಯೇ, ಹೆಸಿಯೆಡ್ ಎಂಬ ಇನ್ನೊಬ್ಬ ಮಾಲೀಕ ತನ್ನಲ್ಲಿದ್ದ ಎಲ್ಲ ಒಂಬತ್ತು ಜನ ಗುಲಾಮರಿಗೂ ಆ ಯುಗದ ಹಲವಾರು ಪ್ರಮುಖ ಕವಿಗಳ ಭಾವಗೀತೆಗಳನ್ನು ಕಂಠಸ್ಥ ಮಾಡಿಸಿ ಸುಗಮ ಸುಶ್ರಾವ್ಯವಾಗಿ ಹಾಡಿಸುತ್ತಿದ್ದನಂತೆ...ಅಂಥ ಗುಲಾಮರಲ್ಲಿ ಹಲವಾರು ಮಂದಿ ಕಾವ್ಯ ಮೀಮಾಂಸೆಕಾರರು, ವೈಯಾಕರಣಿಗಳೂ ಇದ್ದರು ಎಂಬುದಾಗಿ ಸ್ಟೆಟೋನಸ್ ಎಂಬ ಲೇಖಕ ತನ್ನೊಂದು ಸಂಶೋಧನ ಲೇಖನ ಸಂಕಲನದಲ್ಲಿ ತಿಳಿಸುತ್ತಾನೆ[2]" ಎಂಬುದಾಗಿ ಬರೆಯುವ ಬೇರೋ ಆ ಬಗ್ಗೆ ಇನ್ನೂ ಬೇಕಾದಷ್ಟು ವಿವರಗಳನ್ನು ನೀಡುತ್ತಾನೆ.

---

* ಭಾರತೀಯ ಸಂಗೀತ ಹಾಗು ಸಾಹಿತ್ಯ ಕಲೆಯ ಸಂದರ್ಭದಲ್ಲಿ ಇದನ್ನು 'ಗಮಕ ಕಲೆ 'ಗೆ ಹೋಲಿಸುವುದಾದರೆ, ಅಸ್ಪೃಶ್ಯರನ್ನು ಈ ಕಲೆಯಿಂದ ದೂರವಿರಿಸಲಾಗಿತ್ತು ಎಂಬುದನ್ನೂ, ಜನಪದ ಮಟ್ಟುಗಳು ಮಾತ್ರ ಅವರಿಗೆ ಸಾಧ್ಯವಿತ್ತು ಎಂಬುದನ್ನೂ ಕನ್ನಡದ ಅನೇಕ ದಲಿತ ಕವಿಗಳ ಕಾವ್ಯಗಳಲ್ಲಿ ಕಾಣಬಹುದಾಗಿದೆ.

2 R. H. Barrow. Slavery in the Roman Empire P. 63

ಅದೇ ರೀತಿಯಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನದ ಕಲೆ ಶಿಕ್ಷಣ ಮತ್ತು ನಾಗರೀಕತೆಗಳಿಗೆ ಅಲ್ಲಿನ ನೀಗ್ರೋ ಪ್ರತಿಭಾವಂತರು ಮಾಡಿರುವ ಅಮೂಲ್ಯ ಕೊಡುಗೆಗಳ ಬಗೆಗೆ ಬೇರೋನಷ್ಟೆ ಪ್ರಖ್ಯಾತನಾದ ಚಾರ್ಲ್ಸ್-ಸಿ-ಜಾನ್‌ಸನ್ ಎಂಬ ಚರಿತ್ರೆಗಾರ ಹೀಗೆ ಬರೆಯುತ್ತಾನೆ :"ಉತ್ತರ ಕರೋಲಿನ್‌ನ ಗ್ರಾನ್‌ವಿಲೆಕೌಂಟಿ ಎಂಬ ತಗ್ಗು ಪ್ರದೇಶದಲ್ಲಿ ವಾಸಿಸುತಿದ್ದ ಒಬ್ಬ ನೀಗ್ರೊ, ಪ್ರಿನ್ಸ್‌ಬರ್ಗ್ ವಿಶ್ವವಿದ್ಯಾನಿಲಯದ ಪದವೀಧರನಾಗಿದ್ದು, ಆನಂತರ ಬಿಳಿಯ ವಿದ್ಯಾರ್ಥಿಗಳಿಗಾಗಿ ಶಾಲೆ ಒಂದುನಡೆಸುತ್ತಿದ್ದನು. ಈ ಶಾಲೆ ಸ್ಥಳೀಯ ಸರಕಾರದ ಮನ್ನಣೆ ಪಡೆದಿದ್ದುದು ಮಾತ್ರವಲ್ಲದೆ, ಇಡೀ ಪ್ರಾಂತ್ಯದ ಬಿಳಿಯ ಸಭಿಕರಿಗೆ ಧರ್ಮಬೋಧನೆಯನ್ನು ಅವನು ನೀಡುತಿದ್ದನು. ಅದೇ ಶಾಲೆಯಲ್ಲಿ ಕಲಿತ ವಿದ್ಯಾರ್ಥಿಗಳಲ್ಲಿ ಒಬ್ಬ ಉತ್ತರ ಕರೋಲಿನಾನ ಗೌರ್ನರ್ ಆದುದು ಮಾತ್ರವಲ್ಲದೆ, ಅಮೆರಿಕದ ಸೆನೆಟ್‌ನ ಪ್ರಖ್ಯಾತ ಸೆನೆಟರ್ ವಿಂಗ್ ಕೂಡ ಇದೇ ಶಾಲೆಯ ವಿದ್ಯಾರ್ಥಿಯಾಗಿದ್ದ. ಉತ್ತರ ಕರೋಲಿನ್‌ನ ನ್ಯಾಯಾಧೀಶನ ಇಬ್ಬರು ಮಕ್ಕಳು ಕೂಡ ಅದೇ ಶಾಲೆಯ ಮುಖ್ಯಸ್ಥನಾದ ನೀಗ್ರೋ ಜಾನ್‌ಜಾವೀಸ್‌ನ ವಿದ್ಯಾರ್ಥಿಗಳಾಗಿದ್ದರು. ಅಮೆರಿಕದ ಮಿಲಿಟರಿ ಅಕಾಡೆಮಿಯ ಸಂಸ್ಥಾಪಕನ ತಂದೆ ಆ ಶಾಲೆಯ ವಿದ್ಯಾರ್ಥಿಯಾಗಿದ್ದುದು ಮಾತ್ರವಲ್ಲದೆ, ಆ ವಿದ್ಯಾರ್ಥಿ ತನ್ನ ವಿದ್ಯಾಭ್ಯಾಸ ಕಾಲದಲ್ಲಿ ಜಾನ್‌ಜಾವೀಸ್‌ನ ಮನೆಯಲ್ಲೇ ವಾಸವಾಗಿದ್ದನು"[1] ಎಂಬುದಾಗಿ ಜಾನ್‌ಸನ್ ಬರೆಯುತ್ತಾನೆ.

ಈ ಇಬ್ಬರು ಪ್ರಖ್ಯಾತ ಚರಿತ್ರೆಗಾರರ ಎರಡು ಉದ್ಧರಣೆಗಳಲ್ಲಿ ಕೆಲವು ಚಿಂತನಾರ್ಹ ಅಂಶಗಳಿರುವಂತೆ ತೋರುತ್ತದೆ. ನಿದರ್ಶನಕ್ಕೆ, ಪಾಶ್ಚಾತ್ಯ ಸಂಸ್ಕೃತಿಯಲ್ಲಿ ನೀಗ್ರೊಗುಲಾಮರು ಆ ಯುಗದ ಮಹಾಕಾವ್ಯಗಳ ಪ್ರವಚನಾಚಾರ್ಯರಾದುದು ಮಾತ್ರವಲ್ಲದೆ, ಕವಿಗಳು, ಕಲಾವಿದರು, ಕಾವ್ಯಮೀಮಾಂಸಕರು, ವೈಯಾಕರಣಿಗಳೂ ಆದುದ್ದರಿಂದ ಅರ್ಥ ಅನ್ಯದೃಷ್ಟಿಯಲ್ಲಿ ಏನೇ ಆಗಿದ್ದರೂ, ಸಾಹಿತ್ಯದ ದೃಷ್ಟಿಯಲ್ಲೂ ಮಾನವ ಸಂಸ್ಕೃತಿಯ ಜೀವಂತಿಕೆಯ ದೃಷ್ಟಿಯಲ್ಲೂ ವಿಚಾರಣೀಯವಾದುದು. ಏಕೆಂದರೆ, ಆಫ್ರಿಕನ್ ಕಪ್ಪು ಸಾಹಿತ್ಯದಲ್ಲಿ ಸುಪ್ರಸಿದ್ಧ ಲೇಖಕರಾದ ಚಿನುಅ ಅಚಿಬೆ ಮತ್ತು ಓಲಿಸೋಯಿಂಬಾರಂಥ ಲೇಖಕರಾಗಲಿ[2] ಅಥವಾ ಅಮೆರಿಕನ್ ನೀಗ್ರೊ ಲೇಖಕರಾದ ರಾಬರ್ಟ್ ಜೋನ್, ಡೇನಿಯಲ್ ವೆಬ್‌ಸ್ಟರ್ ಡೇವೀಸ್ ಅಥವಾ ಲಾಂಗ್‌ಸ್ಟನ್ ಹಗ್ಸ್‌ರಂಥ ಲೇಖಕರಾಗಲಿ ತಮ್ಮಷ್ಟಕ್ಕೆ ತಾವೇ ಪ್ರಪಂಚದ ಚಿತ್ತಾಕರ್ಷಿಸಿದ ಲೇಖಕರೆನಿಸಿದವರಲ್ಲ. ಬದಲಾಗಿ, ನೂರಾರು ವರ್ಷಗಳ ಪರ್ಯಂತ ತಮ್ಮ ಜನಾಂಗದ ನೂರಾರು ತಲೆಮಾರುಗಳ ಸಾಂಸ್ಕೃತಿಕ ಚರಿತ್ರೆಯ ವಾಹಿನಿಯಲ್ಲಿ ತೇಲಿಬಂದವರಾಗಿದ್ದಾರೆ

1 Charles - C - Johnson. The Negroes in American Civilisation.
2 African Literature Today. (No. 5 the Novel in Africa) (Ed.) Eldred Durosimi Jone P.4-7-1671

ಎಂಬುದನ್ನು ನೆನಪಿಡಬೇಕಾಗುತ್ತದೆ.[1] ಆದರೆ ಭಾರತೀಯ ಸಾಹಿತ್ಯ ಮತ್ತು ಸಂಸ್ಕೃತಿಯ ಸಂದರ್ಭದಲ್ಲಿ, ಅದರಲ್ಲೂ ಕನ್ನಡ ಸಾಹಿತ್ಯದಲ್ಲಿ ಇಂಥ ನಿದರ್ಶನಗಳು ಅತ್ಯಂತ ವಿರಳ ; ಅಥವಾ ತೀರಾ ಇಲ್ಲವೇ ಇಲ್ಲವೆಂದರೂ ತಪ್ಪಾಗುವಂತಿಲ್ಲ. ಆದ್ದರಿಂದಲೇ ಡಾ॥ ಅಂಬೇಡ್ಕರರು ಹೀಗೆ ಹೇಳುತ್ತಾರೆ. "The Untouchable has no entry into higher arts of civilisation and no way open to a life of culture"[2] ಎಂತಲೇ ಕನ್ನಡ ಭಾಷೆಯಲ್ಲಿ ದಲಿತ ವರ್ಗದ ಒಬ್ಬ ಕವಿ ಸೃಜನಾತ್ಮಕ ಸಾಹಿತ್ಯ ಕ್ರಿಯೆಯಲ್ಲಿ ತೊಡಗಿದನೆಂದರೆ, ಹೊರ ನೋಟಕ್ಕೆ ಅದು ತೀರಾ ಸಾಮಾನ್ಯ ವಾಗಿ ಕಂಡರೂ ವಾಸ್ತವದ ನೆಲೆಯಲ್ಲೂ, ಚಾರಿತ್ರಿಕ ದೃಷ್ಟಿಯಲ್ಲೂ ಅದು ಸಾಮಾನ್ಯ ವಿಷಯವೇನಲ್ಲ. ಅಥವಾ ಬಿ. ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು ಬೂಸಾ ಎಂದ ಕಾರಣಕ್ಕಾಗಿ ಅವರನ್ನು ಮಂತ್ರಿ ಪದವಿಯಿಂದ ಕೆಳಗಿಳಿಸಲಾಯಿತು. ಅದರಿಂದುಂಟಾದ ಅಪಮಾನಕ್ಕೆ ಪ್ರತೀಕಾರವಾಗಿ ದಲಿತ ವರ್ಗದ ಕೆಲದರು ಲೇಖಕ ರಾದರು ಅಥವಾ ಕಾವ್ಯರಚನೆ ಮಾಡತೊಡಗಿದರು ಎಂಬ ತೀರ್ಮಾನಕ್ಕೆ ಬರುವುದು ಕೂಡ ಸಮಂಜಸವೆನಿಸುವಂತಿಲ್ಲ,

ದಲಿತ ಸಾಹಿತ್ಯಕ್ಕೂ ನೀಗ್ರೊ ಸಾಹಿತ್ಯಕ್ಕೂ ನಡುವೆ ಎದ್ದು ಕಾಣುವ ಬಹು ಮುಖ್ಯವಾದ ಎರಡು ಸಮಾನ ಅಂಶಗಳೆಂದರೆ (1) ಆ ಬರಹಗಾರರಲ್ಲಿನ ವೃತ್ತಿ ವೈವಿಧ್ಯತೆಯ ಹಿನ್ನಲೆ ; (2) ಈ ಸಾಹಿತ್ಯವನ್ನು ದಲಿತೇತರ ಹಾಗೂ ನೀಗ್ರೊಗಳಲ್ಲದ ವಾಚಕವರ್ಗ ಆ ಸಾಹಿತ್ಯ ಕಲಾತ್ಮಕತೆಯ ಬಗೆಗೆ ತಳೆದ ಧೋರಣೆಯಲ್ಲಿನ ಕೆಲವು ಗಂಭೀರ ಪರಿಮಿತಿಗಳು.

ಮೊದಲನೆಯದಾಗಿ, ದಲಿತ ಸಾಹಿತ್ಯದ ಸೃಜನ ಕ್ರಿಯೆಯ ಹಿಂದಿರುವ ಸೃಜನ ಶೀಲ ಲೇಖಕರ ವೃತ್ತಿವೈವಿಧ್ಯತೆ. ಉದಾಹರಣೆಗೆ, ದಲಿತ ಸಾಹಿತ್ಯದ ಸೃಷ್ಟಿ ಕ್ರಿಯೆಯಲ್ಲಿ ತೊಡಗಿರುವ ಲೇಖಕರಲ್ಲಿ ಬಹುತೇಕ ವಿಶ್ವವಿದ್ಯಾನಿಲಯಗಳಲ್ಲಿನ ವಿವಿಧ ವಿಷಯಗಳಾದ ಕಲೆ, ಸಾಹಿತ್ಯ, ಇತಿಹಾಸ, ಸಮಾಜ ವಿಜ್ಞಾನವೇ ಮುಂತಾದ ಮಾನವಿಕ ವಿಷಯಗಳಲ್ಲೂ, ನಿಸರ್ಗ ವಿಜ್ಞಾನ ಮತ್ತು ತಂತ್ರಜ್ಞಾನಗಳಂಥ ವಿಷಯ ಗಳಲ್ಲೂ ಪದವಿ ಪಡೆದದಾಗಿರುವುದನ್ನು ಕಾಣಬಹುದಾಗಿದೆ. ಹೀಗಿದ್ದೂ, ಈ ಹಲವಾರು ವಿಷಯಗಳ ಹಿನ್ನೆಲೆಯಿಂದ ಬಂದಂಥ ಲೇಖಕರು ಸೃಷ್ಟ್ಯಾತ್ಮಕ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ್ದಾರೆ. ಅಲ್ಲದೆ, ಇವರಲ್ಲಿ ಬಹುತೇಕ ಎಲ್ಲರೂ ತಮ್ಮ ಮಾತೃಭಾಷೆಯಾದ ಕನ್ನಡದಲ್ಲೇ ಬರೆದವರು.* ಹಾಗಾಗಿ ಇವರೆಲ್ಲರೂ ಬಹುತೇಕ

---

1 The writings of Oole Sovinka. P. 6-11-1973

2 Dr. Babasaheb Ambedkar Writings and Speaches, Vol. 5 P.17, 1989 (ed) Vasanth Moon.

* ಇದರರ್ಥವೇನೆಂದರೆ, ದಕ್ಷಿಣ ಆಫ್ರಿಕಾದಲ್ಲಿ ಅನ್ಯಾನ್ಯ ಬುಡುಕಟ್ಟುಗಳ ಹಿನ್ನೆಲೆಯಿಂದ ಬರುವ ನೀಗ್ರೊ ಲೇಖಕರ ಮಾತೃಭಾಷೆಯೇ ಬೇರೆಯಾಗಿದ್ದು, ಅವರು ಬರೆದದ್ದೆಲ್ಲ ಅಲ್ಲಿನ ವಿಶ್ವವಿದ್ಯಾ ನಿಲಯಗಳ ಶೈಕ್ಷಣಿಕ ಭಾಷೆಗಳಾದ ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳಲ್ಲಿ.

ವಿಶ್ವವಿದ್ಯಾನಿಲಯಗಳ ಪದವೀಧರರಾಗಿದ್ದರೂ, ಸಾಹಿತ್ಯವೇ ಮೊದಲಾದ ಮಾನವಿಕ ವಿಷಯಗಳಲ್ಲಿ ಅಧ್ಯಯನ ಮತ್ತು ಅಧ್ಯಾಪನಶೀಲರಾಗಿರುವುದು ಮಾತ್ರವಲ್ಲದೆ, ಇವರಲ್ಲಿ ವೈದ್ಯರು, ಕೃಷಿ ವಿಜ್ಞಾನಿಗಳು ಮತ್ತು ಆಡಳಿತಗಾರರು ಕೂಡ ಇರುವುದನ್ನು ಗಮನಿಸಬಹುದಾಗಿದೆ. ಅಷ್ಟೇ ಅಲ್ಲದೆ ಸಾಹಿತ್ಯದಲ್ಲಿ ಶಿಕ್ಷಣವಿಲ್ಲದ ಕೆಲವು ಸಾಮಾಜಿಕ ಕಾರ್ಯಕರ್ತರು ಕೂಡ ಈ ಲೇಖಕರಲ್ಲಿ ಅನೇಕ ಮಂದಿ ಇದ್ದಾರೆ.

ಅದೇ ದಕ್ಷಿಣ ಆಫ್ರಿಕಾದ ನೀಗ್ರೊ ಲೇಖಕರ ಹಿನ್ನೆಲೆಯನ್ನು ಕುರಿತಂತೆ ಲಾಂಗ್‌ಸ್ಟನ್ ಹಗ್ಸ್ ನೀಡುವ ಮಾಹಿತಿ ಹೀಗಿದೆ : "To communicate from one land to another, one culture to another, particularly when the language is not one's own tongue but acquired-as English and French-are for some of these writers-presents its problems. Amos Tutuola, born in the Nigerian jungle, has had very tittle schooling ; he earms his living working in metals : But Abiosch Nicos of Sierra Leone is a graduate of Cambridge and a practicing physician. Matei Markwei of Ghana, well in his thirties, is still studying for a college degree. But Wole Soyinka took honoars in his youth at the University of leeds. Peter Kumalo is a dock worker on the wharfs of cape province. But Benibengor Blay is a member of parliament at Accra; and Leepold shedar senghor, depute from Senegal, has long held a seat in the National Assembly at paris. Each of these writers, however, varied their backgrounds, has the capacity for communicating in words-a capacity that comes from innate talents[1]". ಆದಾಗ್ಯೂ, ಇಲ್ಲಿ ಕಾಣಿಸಲೇ ಬೇಕಾಗಿರುವ ಒಂದು ಸೂಕ್ಷ್ಮ ಸಂಗತಿ ಏನೆಂದರೆ, ನೀಗ್ರೊ ಲೇಖಕರಂತೆಯೇ ದಲಿತ ಲೇಖಕರಿಗೂ ಅನ್ಯಾನ್ಯ ವ್ಯಕ್ತಿಗಳ ವೈವಿಧ್ಯಮಯವಾದ ಹಿನ್ನೆಲೆಯಿರುವುದಷ್ಟೇ ಅಲ್ಲದೆ, ಅವರಂತೆಯೇ ಇವರು ಕೂಡ ಜನ್ಮಜಾತ ಪ್ರತಿಭೆಯನ್ನೂ ತಮ್ಮ ಹುಟ್ಟಿನೊಡನೆಯೇ ತಮಗೆ ಬಳುವಳಿಯಾಗಿ ತಮಗೆ ಪ್ರಾಪ್ತವಾಗುವ ಜನಪದ ಕಲಾ ಭಾಷಕೋಶವನ್ನು ಹೊಂದಿರುವುದನ್ನು ಗಮನಿಸಬಹುದಾಗಿದೆ. ಆದರೆ ಒಂದು ಗಮನಾರ್ಹವಾದ ವ್ಯತ್ಯಾಸವೇನೆಂದರೆ, ನೀಗ್ರೊ ಸಾಹಿತ್ಯ ಸೃಷ್ಟಿಯ ಹಿಂದೆ ಸಾವಿರಾರು ವರ್ಷಗಳ ಅಭಿವ್ಯಕ್ತಿ ಸ್ವಾತಂತ್ರ್ಯವಿದ್ದು, ಅವರ ಅಭಿವ್ಯಕ್ತಿ ಅವರ ಗುಲಾಮಗಿರಿಯಷ್ಟೇ ಪ್ರಾಚೀನತಮವಾದುದು ಕೂಡ ಆಗಿದೆ. ಅದಕ್ಕೆ ಡಾ. ಅಂಬೇಡ್ಕರರು ಕೊಡುವ ಕಾರಣ ತುಂಬಾ ಅರ್ಥಪೂರ್ಣವೂ ವಿಚಾರಣೀಯವೂ ಆದುದೆನಿಸುತ್ತದೆ.

---

1. Longston Hughes. An African Treasury. P.X–1960.

"Slavery was never obligaroty. But untouchability is obligatory... The law of slavery permitted emancipation. Once a slave always a slave was not the fate of the slave. But once an untouchable always an untouchable"[1]. ಅಂದರೆ, ನೀಗ್ರೊ ಲೇಖಕರಿಗಿರುವ ಅಕ್ಷರ ಸ್ವಾತಂತ್ರ್ಯವಾಗಲಿ ಅಭಿವ್ಯಕ್ತಿ ಸ್ವಾತಂತ್ರ್ಯವಾಗಲಿ ಭಾರತೀಯ ಸಂಸ್ಕೃತಿಯ ಸಂದರ್ಭದಲ್ಲಿ ದಲಿತರಿಗಿರಲಿಲ್ಲವೆಂಬುದು ಸತ್ಯವೇ; ಅಷ್ಟೇ ಅಲ್ಲದೆ, ಸಾಧಾರವಾಗಿಯೇ ಹೇಳಬೇಕೆಂದರೆ ಕನ್ನಡ ದಲಿತ ಸಾಹಿತ್ಯಕ್ಕೆ ಬಹಳವೆಂದರೆ, ಎರಡು ಅಥವಾ ಮೂರು ದಶಕಗಳ ಚರಿತ್ರೆ ಇದ್ದೀತೆಂಬುದು ಕೂಡ ಸತ್ಯ ಸಂಗತಿಯೇ ಆಗಿದೆ. ಆದರೆ, ಈ ಎರಡು ಅಥವಾ ಮೂರು ದಶಕಗಳ ಕಾಲಘಟ್ಟದಲ್ಲಿ ಸೃಷ್ಟಿಯಾದ ಸಮಗ್ರ ದಲಿತ ಸಾಹಿತ್ಯವನ್ನು ಒಂದು ಗಂಭೀರ ಅಧ್ಯಯನಕ್ಕೆ ಒಳಪಡಿಸಿದ ಬಳಿಕ ಮನಸ್ಸಿನ ಮೇಲೆ ಮೂಡಿ ನಿಲ್ಲುವ ಮುಖ್ಯವಾದ ಸಂಗತಿ ಎಂದರೆ, ತಮ್ಮಷ್ಟೇ ಅನ್ಯಾಯ, ಅವಮಾನ ಮತ್ತು ಅಮಾನುಷ ಪರಿಸ್ಥಿತಿಗಳ ನಡುವೆಯೂ ಸೃಷ್ಟಿಯಾದ ನೀಗ್ರೊ ಸಾಹಿತ್ಯದ–ಕೊನೆಯ ಪಕ್ಷ–ಅದರ ಹಿಂದಿರುವ ಅಧ್ಯಯನದ ಬಲವನ್ನಾದರೂ ಪ್ರಸ್ತುತ ದಲಿತ ಸಾಹಿತ್ಯದ ಹಿನ್ನೆಲೆಯಲ್ಲಿ ಕಾಣಲು ಸಾಧ್ಯವಿಲ್ಲವೆಂಬುದನ್ನು ಅಲ್ಲಗಳೆಯುವಂತಿಲ್ಲ.

ಇನ್ನು ಎರಡನೆಯದಾಗಿ, ದಲಿತ ಹಾಗೂ ನೀಗ್ರೊ ಸಾಹಿತ್ಯದ ಕಲಾತ್ಮಕತೆಯ ಬಗೆಗೆ ದಲಿತೇತರರು ಹಾಗೂ ನೀಗ್ರೊಗಳಲ್ಲಿನ ವಾಚಕ ವರ್ಗ ತಳೆದ ಧೋರಣೆಯಲ್ಲಿನ ಕೆಲವು ಗಂಭೀರ ಪರಿಮಿತಿಗಳು. ನಿದರ್ಶನಕ್ಕೆ, ದಲಿತ ಸಾಹಿತ್ಯದ ಬಗೆಗೆ ಮಾತನಾಡುವ ಯಾವುದೇ ಸಂದರ್ಭದಲ್ಲೂ ಆ ಸಾಹಿತ್ಯವನ್ನು ಕಲೆ ಎಂದು ಕರೆಯುವುದಕ್ಕಿಂತ ಅಥವಾ ಅಲ್ಲಿ ಕಲೆಗಿಂತಲೂ ಮೊದಲಾಗಿ ಸಾಮಾಜಿಕ-ಆರ್ಥಿಕ ಶೋಷಣೆಯ ವಿರುದ್ಧದ ಪ್ರತಿಭಟನಾತ್ಮಕ ಧ್ವನಿಯೇ ಪ್ರಥಮ ಎಡೆ ಪಡೆದಿರುವ ವಾಸ್ತವದ ಹಿನ್ನೆಲೆಯಲ್ಲಿ ಹೇಳುವುದಾದರೆ, ದಲಿತ ಸಾಹಿತ್ಯವನ್ನು ಕಲೆ ಅಥವಾ ಸಾಹಿತ್ಯ ಎನ್ನುವ ಬದಲು, ಅದೊಂದು ಪ್ರತಿಭಟನೆಯ ದಾಖಲೆ ಎನ್ನುವುದೇ ಸೂಕ್ತ ಎಂಬುದಾಗಿ, ಅನೇಕ ವಿಮರ್ಶಕರು ಹಲವಾರು ಸಂದರ್ಭಗಳಲ್ಲಿ ಅಭಿಪ್ರಾಯ ಪಡಲಾಗಿರುವುದನ್ನು ಕಾಣಬಹುದಾಗಿದೆ. ಅದೇ ಸಮಯದಲ್ಲಿ ದಕ್ಷಿಣ ಆಫ್ರಿಕಾದ ಕಪ್ಪು ಸಾಹಿತ್ಯದ ಬಗೆಗೂ ಕೆಲವು ಪಾಶ್ಚಾತ್ಯ ವಿಮರ್ಶಕರು ಇದೇ ರೀತಿಯ ಅಭಿಪ್ರಾಯ ಪಡಲಾಗಿರುವುದನ್ನು ಕಾಣಬಹುದಾಗಿದೆ. ಆ ಬಗ್ಗೆ ಅರ್ನೆಸ್ಟ್ ಎಮಿನೊ ಹೀಗೆ ಬರೆಯುತ್ತಾನೆ, ಕಪ್ಪು ಸಾಹಿತ್ಯ "to a few, it is simply a political document of protest against the assumptions of colonialism and imperialism as they relate to the world of the black man"[2]. ಈ ಅಭಿಪ್ರಾಯದಲ್ಲಿನ ಗಮನಾರ್ಹ

1 Dr. Babasaheb Ambedkar Writings and Speeches. Vol. 5 P. 14–16–1989. (Ed. by Vasanth Moon).

2 African Literature today. No. 5 P. 1 (ed) by E. D. Jones.

ವಾದ ಅಂಶವೆಂದರೆ, ಬಹುಸಂಖ್ಯಾತ ಕಪ್ಪು ಜನಾಂಗದ ಮೇಲಿನ ಅಲ್ಪ ಸಂಖ್ಯಾತರಾದ ಬಿಳಿಯ ವಸಾಹತುಶಾಹಿ ಹಾಗೂ ಸಾಮ್ರಾಜ್ಯಶಾಹಿ ದಬ್ಬಾಳಿಕೆಯನ್ನು ಕೇವಲ 'assumptions' ಎಂಬುದಾಗಿ ಕರೆಯಲಾಗಿರುವುದು. ಅಂದರೆ, ಪಾಶ್ಚಾತ್ಯ ಪಟ್ಟಭದ್ರರು ಕಪ್ಪು ಸಾಹಿತ್ಯವನ್ನು ನೋಡುವ ಮೂಲಭೂತ ದೃಷ್ಟಿ ಹಾಗೂ ಧೋರಣೆ ಏನೆಂಬುದನ್ನು ಇಲ್ಲಿ ಕಾಣಬಹುದಾಗಿದೆ. ಅಲ್ಲದೆ ಕಪ್ಪು ಅಥವಾ ನೀಗ್ರೊ ಸಾಹಿತ್ಯವನ್ನು ಕುರಿತ ಈ ದೃಷ್ಟಿ ಮತ್ತು ಧೋರಣೆಗಳು ಇಷ್ಟಕ್ಕೇ ನಿಲ್ಲಲೂ ಇಲ್ಲ. ಅದು ಎಲ್ಲಿಯವರೆಗೆ ಮುಂದುವರಿಯಿತೆಂದರೆ, ಇಡೀ ಅಮೆರಿಕಾ ಮತ್ತು ಆಫ್ರಿಕಾ ಖಂಡಗಳಲ್ಲಿ ಸುಪ್ರಸಿದ್ಧನೂ ಪ್ರತಿಷ್ಠಿತನೂ ಆದ ಚಿನುಅ ಅಚಿಬೆಯ ಸಾಹಿತ್ಯವನ್ನು ಸಹ ಇದೇ ಪಟ್ಟಿಗೆ ಸೇರಿಸಲು ಕೆಲವು ವಿಮರ್ಶಕರು ತರಾತುರಿಯಲ್ಲಿ ಮುಂದಾದರೆ, ಮತ್ತೆ ಕೆಲವರು "some of those people were quick to rush to the conclusion that they would soon get bored with the contents of African literature. When Chinua Achebe's second novel 'No longer at Ease' appeared in 1961, many critics had no further doubts in their minds the African novel of the second half of the twenteth century was simply the sociological document"[2] ಎಂಬ ತೀರ್ಮಾನದಲ್ಲಿ ವಿರಮಿಸಿದರು.

ಇನ್ನು ಈ ಎರಡು ಸಾಹಿತ್ಯದಲ್ಲೂ ಸಾಮಾನ್ಯವಾಗಿ ಕಾಣಬಹುದಾಗಿರುವ ಮೂರನೆಯ ಹಾಗೂ ಮುಖ್ಯವಾದ ಅಂಶವೆಂದರೆ ಸಿಟ್ಟು ಅಥವಾ ಆಕ್ರೋಶ. ಬಹುಶಃ ದಲಿತ ಸಾಹಿತ್ಯದಲ್ಲಿನ ಸಿಟ್ಟು ಅಥವಾ ಆಕ್ರೋಶಗಳನ್ನು ಕುರಿತ ಆಕ್ಷೇಪಕ್ಕೆ ಡಾ. ಜಿ. ಎಸ್. ಶಿವರುದ್ರಪ್ಪನವರು ತಮ್ಮದೇ ಆದ ರೀತಿಯಲ್ಲಿ ಉತ್ತರವನ್ನು ಕಂಡುಕೊಂಡು ಅದನ್ನವರು ಸಮರ್ಥಿಸಿರುವುದನ್ನು ಈ ಹಿಂದಿನ ಅಧ್ಯಾಯದಲ್ಲೇ ತೋರಿಸಿ ಕೊಡಲಾಗಿದೆ. ಆದ್ದರಿಂದ ಅದೇ ಸಿಟ್ಟು ಅಥವಾ ಆಕ್ರೋಶ ನೀಗ್ರೊ ಸಾಹಿತ್ಯದಲ್ಲಿ ಏನಾಗಿದೆ ಎಂಬುದನ್ನು ಈ ಮುಂದಿನ ಭಾಗದಲ್ಲಿ ಸ್ವಲ್ಪಮಟ್ಟಿಗೆ ನೋಡಲೆತ್ನಿಸ ಬಹುದಾಗಿದೆ.

ರಾಬರ್ಟ್ ಹಿಲ್ ಎಂಬ ಲೇಖಕ ನೀಗ್ರೊ ಸಾಹಿತ್ಯವನ್ನು ಕುರಿತ "Anger and beyond" ಎಂಬ ತನ್ನೊಂದು ಸಂಶೋಧನ ಗ್ರಂಥದಲ್ಲಿ ನೀಗ್ರೊ ಸಾಹಿತ್ಯದಲ್ಲಿ ಸಾಮಾನ್ಯವೇ ಆಗಿರುವ ಆಕ್ರೋಶವನ್ನು ಕುರಿತು ಹಲವಾರು ವಿನೂತನ ಸಂಗತಿಗಳನ್ನು ತೆರೆದು ತೋರುತ್ತಾನೆ. ಉದಾಹರಣೆಗೆ, ಅಮೆರಿಕನ್ ಸಮಾಜದಲ್ಲಿ ನೀಗ್ರೊ ಲೇಖಕ ಕೆಲವು ತೀವ್ರ ವೈರುಧ್ಯಗಳ ನಡುವೆ ಬದುಕಬೇಕಾದುದು ಅನಿವಾರ್ಯವೆನಿಸುತ್ತದೆ. ಒಂದೆಡೆ, ಒಬ್ಬ ಕರಿಯ ವರ್ಣೀಯನಾಗಿ ಸಾಮಾಜಿಕ ಹೀನಾಯಕ್ಕೂ, ಇನ್ನೊಂದೆಡೆ ಆ ಕಾರಣಕ್ಕಾಗಿಯೇ ಆರ್ಥಿಕ ಅವಕಾಶಗಳ ವಂಚನೆಗೂ ಅವನು ಸಿಲುಕ

2. Ibid. P. 2.

ಬೇಕಾಗುತ್ತದೆ. ಅಂದರೆ, ಈ ರೀತಿಯ ವಿಚಿತ್ರವೂ ಸಂದಿಗ್ಧವೂ ಆದ ಪರಿಸ್ಥಿತಿಯ ಮಡಿಲಲ್ಲೇ ವಿಕಸನಗೊಳ್ಳುವ ಯಾವುದೇ ಒಬ್ಬ ನೀಗ್ರೊ ಸಾಹಿತಿಯ ಸೃಜನಶೀಲ ಸಾಹಿತ್ಯದ ಆಲೋಚನೆಯ ಮೂಲದಲ್ಲೇ ಸಿಟ್ಟು ಅಥವಾ ಆಕ್ರೋಶವೆಂಬುದು ಧಾತು ಪ್ರಾಯವಾಗಿ ಕೆಲಸ ಮಾಡುತ್ತ ನಡೆದಿರುತ್ತದೆ. ಅಲ್ಲದೆ, ಅದು ಅನಿವಾರ್ಯವೆಂಬುದನ್ನು ಮರೆಯದಿರುವಂತಿಲ್ಲ. ಅದೇ ಸಂದರ್ಭದಲ್ಲಿ ಮತ್ತೊಂದು ಮುಖ್ಯವಾದ ಸಂಗತಿ ಎಂದರೆ, ಬಿಳಿಯರಿಗೆ ಅಸಾಧ್ಯವೂ ಕರಿಯರಿಗೆ ಮಾತ್ರ ವಿಶಿಷ್ಟವೂ ಅನಿವಾರ್ಯವೂ ಆದ ಈ ಎರಡು ಬಗೆಯ ಸವಾಲುಗಳಿಗೆ ಎದುರಾದ ಯಾವನೇ ನೀಗ್ರೊ ಸಾಹಿತಿ, ಆಮೂಲಕ ತನ್ನ ಸಾಹಿತ್ಯ ನಿರ್ಮಿತಿಯಲ್ಲಿ ಒಂದು ವಿಶಿಷ್ಟ ರೀತಿಯ ಶಕ್ತಿಯನ್ನೂ ತದ್ರೂಪದ ಅಭಿವ್ಯಕ್ತಿಯನ್ನೂ ಪಡೆದುಕೊಳ್ಳುತ್ತಾನೆ–ಪಡೆದುಕೊಳ್ಳಲು ಸಾಧ್ಯವೂ ಆಗಿದೆ ಎಂಬುದನ್ನು ಮರೆಯದಿರಬೇಕಾಗುತ್ತದೆ. ಅಷ್ಟೇ ಅಲ್ಲದೆ, ಈ ಸಂದಿಗ್ಧ ಸವಾಲುಗಳಿಗೆ ಎದುರಾದ ನೀಗ್ರೊ ಲೇಖಕನ ಹೋರಾಟದ ಪ್ರಕ್ರಿಯೆಯಲ್ಲಿ ಸಿಟ್ಟು ತನ್ನ ಸಮಸ್ತ ಜನಾಂಗದ ಜಾಗೃತಿಯ ಮತ್ತು ಎಲ್ಲ ರೀತಿಯ ಬಂಧ ವಿಮೋಚನೆಯ ಧಾತು ಶಕ್ತಿಯೇ ಆಗಿ ಅಡಗಿದೆ ಎಂಬುದನ್ನವನು ಬಲ್ಲವನಾಗಿರುತ್ತಾನೆ. ಅದನ್ನೇ ರಾಬರ್ಟ್ ಹಿಲ್ ಹೀಗೆ ಹೇಳುತ್ತಾನೆ : "For almost two and a half centuries before 1863 more than 90 percent of all coloured people living in the United States were forced to live out of their lives within a brutal and degrading system of slavery that openly declared that Negroes were not human beings but merely things, pieces of property".[1] ಆದರೆ ಬಿಳಿಯರ ಸಾಮಾಜಿಕ ಮತ್ತು ಆರ್ಥಿಕ ಮಾರು ಕಟ್ಟೆಗಳಲ್ಲಿ ಕೇವಲ ಸರಕುಗಳಂತೆ ಮಾರಾಟ ಮಾಡಲ್ಪಡುತಿದ್ದ ಕರಿಯರ ಮಾನವ ಜೀವಗಳು ಆ ಸ್ಥಿತಿಯಲ್ಲೇ ಸದಾ ಕಾಲವೂ ಮುಂದುವರಿಯಲು ಸಾಧ್ಯವಾಗಲಿಲ್ಲ ಎಂಬುದನ್ನು ಡಾ. ಅಂಬೇಡ್ಕರ್‌ರೇ ತೋರಿಸಿ ಕೊಟ್ಟಿರುವುದನ್ನು ಈ ಹಿಂದೆಯೇ ನೋಡಿದ್ದೇವೆ. ಜೊತೆಗೆ, ರಾಬರ್ಟ್ ಹಿಲ್ ಮುಂದುವರಿದು ಹೀಗೆ ಹೇಳುತ್ತಾನೆ : "But there was a great freedom in the creative imagination of Negroes, especially in the way Negroes perceived their status and tried to understand their situation......and now Negro writers in a variety of ways are brilliantly and powerfully transmitting their awarness of the racial situation into literature".[1] ಅಷ್ಟೇ ಅಲ್ಲದೆ, ನೀಗ್ರೊ ಸಾಹಿತ್ಯವು ಇಂದು ಅತ್ಯಂತ ಪ್ರಬುದ್ಧವಾಗಿಯೂ, ಬಿಳಿಯ ಲೇಖಕರ ಸೃಜನಾತ್ಮಕ ಸಾಹಿತ್ಯದ ಅನುಭವ ದ್ರವ್ಯದಲ್ಲಿ ಅಸಾಧ್ಯವೆಂದೆನಿಸುವ ವೈವಿಧ್ಯವೂ ಸಂಕೀರ್ಣವೂ ಆದ ಜೀವನಾನುಭವದಿಂದ ತುಂಬಿದೆ ಎಂಬುದು ಕೂಡ ಸತ್ಯವೇ.

---

1. Anger and beyound P.X IX Ed. Robert Hill.

ಅಲ್ಲದೆ ಸಿಟ್ಟು ಅಥವಾ ಆಕ್ರೋಶ ಕೂಡ ಆ ಸಾಹಿತ್ಯದಲ್ಲಿ ಒಂದು ಪ್ರಧಾನಾಂಶವೆನಿಸಿದೆ ಎಂಬುದನ್ನು ಮರೆಯುವಂತಿಲ್ಲ. ಆದ್ದರಿಂದಲೇ, ಇಡೀ ಮಾನವ ಜನಾಂಗದ ಜೀವನ ಸೌಂದರ್ಯವನ್ನು ನೀಗ್ರೊ ಸಾಹಿತ್ಯದಲ್ಲಿನ ಆಕ್ರೋಶದಲ್ಲೂ ಅದರಾಚೆಗೂ ಕಾಣಲೆತ್ನಿಸಬೇಕಾದುದು ಅನಿವಾರ್ಯವೆಂಬುದನ್ನು ಪ್ರಪಂಚದ ಹಲವಾರು ವಿದ್ವಾಂಸರು ಸಾರಿ ಸಾರಿ ಹೇಳಿರುವುದನ್ನು, ನೀಗ್ರೊ ಸಾಹಿತ್ಯದಲ್ಲೂ ಆ ಕುರಿತ ಸಂಶೋಧನ ಹಾಗೂ ವಿಮರ್ಶನ ಸಂಪುಟಗಳಿಂದಲೂ ತಿಳಿಯಬಹುದಾಗಿದೆ.

ಈಗ ಇದೇ ವಿಷಯದ ಇನ್ನೊಂದು ಮಗ್ಗುಲನ್ನು ಸ್ವಲ್ಪ ಪರಿಶೀಲಿಸಬಹುದಾಗಿದೆ. ದಲಿತ ಸಾಹಿತ್ಯವಲ್ಲಿ ಸಿಟ್ಟು ಪ್ರಧಾನವಾಗಿದೆ ಎಂಬ ಆಕ್ಷೇಪವನ್ನು ಮೇಲಿಂದ ಮೇಲೆ ಎತ್ತಲಾಗುವುದನ್ನು ಆ ಕುರಿತ ವಿಮರ್ಶೆಯಲ್ಲಿ ಕಾಣಬಹುದಾಗಿದೆ. ಇದನ್ನು ಮನಗಂಡ ಬಳಿ ಈವರೆಗೂ ಎತ್ತಲಾಗದಿರುವ ಅಂಥದೇ ಒಂದು ಪ್ರಶ್ನೆ ದಲಿತೇತರ ಸಾಹಿತ್ಯದಲ್ಲೂ ಉದ್ಭವವಾಗುತ್ತದೆ ; ಅಂದರೆ, ಭಾರತೀಯ ಸಾಮಾಜಿಕ ಜೀವನ ಸಂದರ್ಭದಲ್ಲಿ ಕೇವಲ ಒಂದು ಜನಾಂಗ, ಅದು ಕೇವಲ ಒಂದು ಉಪಸಂಸ್ಕೃತಿಯನ್ನು ಅದರ ಜನವಿರೋಧಿ ಮೌಲ್ಯಗಳನ್ನೂ ಸಾವಿರಾರು ವರ್ಷ ಗಳಿಂದ ಹಿಡಿದು ಇಂದಿನವರೆಗೂ ಕನ್ನಡ ಸಾಹಿತ್ಯದಲ್ಲಿ ಅವಿಶ್ರಾಂತವಾಗಿಯೂ ವಿಜೃಂಭಣೆಯಿಂದಲೂ ಮೆರೆಸಿಕೊಂಡು ಬಂದಿರುವುದನ್ನು ಅಂದಿನ ಪಂಪ ಕುಮಾರವ್ಯಾಸರಿಂದ ಹಿಡಿದು ಇಂದಿನ ಕಾರಂತ ಮತ್ತು ಭೈರಪ್ಪರವರೆಗೂ ಕಾಣಬಹುದಾಗಿದೆಯಲ್ಲವೆ . ಅದೇ ವ್ಯವಸ್ಥೆಯ ಜಾತಿಪದ್ಧತಿ, ಅಸ್ಪೃಶ್ಯತೆ, ಸತಿ ಪದ್ಧತಿ ಮತ್ತು ಜಮೀನ್ದಾರಿ ಪದ್ಧತಿಗಳೇ ಮೊದಲಾದ ಜನವಿರೋಧಿ ಪದ್ಧತಿಗಳನ್ನೆಲ್ಲ, ಅದೇ ಒಂದು ಜನಾಂಗದ ಕೇವಲ ಒಂದು ಉಪಸಂಸ್ಕೃತಿಯ ವೈಭವೀ ಕಾರಣಕ್ಕಾಗಿ ಉಪಯೋಗಿಸಿಕೊಂಡು ಬಂದಿರುವುದಕ್ಕೆ ಪ್ರತ್ಯೇಕ ಪುರಾವೆಗಳ ಅಗತ್ಯ ವಿದೆಯೆ ? ಮತ್ತೆ ಅದೇ ಉಪಸಂಸ್ಕೃತಿಯ ಜೀವವಿರೋಧಿ ಮೌಲ್ಯಗಳನ್ನು ಕಲೆಯ ಹೆಸರಿನಲ್ಲಿ, ಅದೂ ಒಂದು ರಾಷ್ಟ್ರೀಯ ಮೌಲ್ಯಗಳನ್ನಾಗಿ ಜನಮನದಲ್ಲಿ ಬಿತ್ತರಿಸಿಕೊಂಡು ಬಂದಿರುವುದನ್ನು ಸಮಗ್ರ ಕನ್ನಡ ಸಾಹಿತ್ಯದಲ್ಲೇ ಕಾಣಬಹುದಾಗಿದೆಯಲ್ಲವೆ ? ಅಂದ ಬಳಿಕ, ಇಷ್ಟೊಂದು ಜ್ವಲಂತ ಪ್ರಶ್ನೆಗಳು ಅಸಂಗತ ವಿಚಾರಗಳನ್ನೇ ಸಿದ್ಧಾಂತಗಳೆಂದು ಪೃಥಕ್ಕರಿಸಿಕೊಂಡು ಬಂದಿರುವ ಕನ್ನಡ ಸಾಹಿತ್ಯದ ಪರಂಪರೆಯಲ್ಲಿನ ಸಾಂಸ್ಕೃತಿಕ ವೈರುದ್ಧ್ಯಗಳನ್ನು ಪ್ರಶ್ನಿಸುತ್ತ ನಡೆದಿರುವ ದಲಿತ ಸಾಹಿತ್ಯದಲ್ಲಿ ಸಿಟ್ಟು ಅಥವಾ ಆಕ್ರೋಶವೆಂಬುದು ಇದ್ದ ಪಕ್ಷದಲ್ಲಿ, ಅದು ಸಮರ್ಥನೀಯವೂ ಸಹಜವಾಗಿಯೂ ಇರುವುದೇ ಆಗಿದೆ. ಅಲ್ಲದೇ, ಅದೇ ಸಿಟ್ಟು ಅಥವಾ ಆಕ್ರೋಶವನ್ನು ಯಥಾ ಪ್ರಕಾರ ನೀಗ್ರೊ ಸಾಹಿತ್ಯದಲ್ಲೂ ಸಹಜವಾಗಿಯೇ ಕಾಣಬಹುದಾಗಿದೆ. ಅದರೆ ಕನ್ನಡ ಸಾಹಿತ್ಯದಲ್ಲಿಯಂತೆ ಪಾಶ್ಚಾತ್ಯ ಸಾಹಿತ್ಯದಲ್ಲಿ ಅದನ್ನೊಂದು ಆಕ್ಷೇಪವನ್ನಾಗಿ ಎತ್ತಹೋಗಿಲ್ಲದಿರುವುದರ ಹಿಂದಿನ ಔಚಿತ್ಯಪ್ರಜ್ಞೆಯನ್ನು ಗಮನಿಸಬಹುದಾಗಿದೆ.

ಬದಲಾಗಿ ನೀಗ್ರೋ ಸಾಹಿತ್ಯದಲ್ಲಿ ಹಾಗೆ ವ್ಯಕ್ತವಾಗಿರುವ ಆಕ್ರೋಶವನ್ನು, ಅದರ ಸೃಷ್ಟಿಕ್ರಿಯೆಯ ಹಿಂದಿರುವ ಮನಸ್ಸಿನ ಸ್ವರೂಪವನ್ನು ಅರ್ಥಮಾಡಿಕೊಳ್ಳುವ ಸಲುವಾಗಿ ವಿಶ್ಲೇಷಣೆಗೆ ಅಳವಡಿಸಿಕೊಂಡಿರುವ ಅಲ್ಲಿ ಅಡಕವಾಗಿರುವ ವೈಜ್ಞಾನಿಕ ದೃಷ್ಟಿಯನ್ನು ವಿಶೇಷವಾಗಿ ಲಕ್ಷಿಸಬೇಕಾಗುತ್ತದೆ.

ಇನ್ನು, ಇನ್ನೊಂದೇ ಒಂದು ಅಂಶವನ್ನು ಇಲ್ಲಿ ಪ್ರಸ್ತಾಪಿಸಿ ತದನಂತರ ಸ್ವತಃ ಪಾಶ್ಚಾತ್ಯ ನೀಗ್ರೊ ಕಾವ್ಯವನ್ನೇ ಬಗೆದು ನೋಡಲಿನ್ನು ಅಣಿಯಾಗಬೇಕಾಗಿದೆ. ಇಲ್ಲಿ ಪ್ರಸ್ತಾಪಿಸಬೇಕಾಗಿರುವ ಇನ್ನೊಂದು ಮುಖ್ಯಾಂಶವೆಂದರೆ, ದಲಿತ ಸಾಹಿತ್ಯದಲ್ಲಿ ಎಂತೋ, ಅಂತೆಯೇ, ನೀಗ್ರೊ ಸಾಹಿತ್ಯದಲ್ಲೂ ಕಡೆಗೆ ಒಲವು ತೋರಿದ ಕೆಲವು ನೀಗ್ರೊ ಲೇಖಕರ ಬಗೆಗೆ ಸ್ವತಃ ನೀಗ್ರೊ ಲೇಖಕರಲ್ಲೂ ಆ ಜನಾಂಗದಲ್ಲೂ ಉಂಟಾದ ಸಾಮೂಹಿಕ ಪ್ರತಿಕ್ರಿಯೆ ಇಲ್ಲಿ ನಿಜಕ್ಕೂ ವಿಚಾರಣೀಯ ಎನಿಸದೆ ಇರುವಂತಿಲ್ಲ. ನಿದರ್ಶನಕ್ಕೆ ಈ ಶತಮಾನದ ಅಮೆರಿಕದ ಪ್ರಮುಖ ನೀಗ್ರೊ ಲೇಖಕರಲ್ಲೊಬ್ಬರಾದ ರಿಚರ್ಡ್ ರೈಟ್‌ನನ್ನು, ಅಮೆರಿಕದ ಬಹುತೇಕ ಎಲ್ಲ ನೀಗ್ರೊ ಲೇಖಕರೂ ಅತ್ಯಂತ ಕಟುವಾಗಿಯೇ ಟೀಕಿಸತೊಡಗಿದರು. ಅದಕ್ಕೆ ಅವರು ಕಂಡುಕೊಂಡ ಎರಡು ಕಾರಣಗಳೆಂದರೆ, 1) ಆತ ಪಟ್ಟಭದ್ರ ಆಡಳಿತರೂಢರಾದ ಬಿಳಿಯರ ಸರಕಾರದ ಬೆಂಬಲಿಗರಾದ ಕಮ್ಯುನಿಸ್ಟ್ ಪಕ್ಷದ ಸಕ್ರಿಯ ಸದಸ್ಯ ಹಾಗೂ ಕಟ್ಟರಾ ಕಮ್ಯೂನಿಸ್ಟ್ ಆಗಿದ್ದುದು. ಒಂದು ವೇಳೆ ಈ ಅಂಶವನ್ನು ಕಡೆಗಣಿಸಿದರೂ, "he did not give a true picture of the Negro"[1] ಎಂಬುದರ ತೀವ್ರ ಆಕ್ಷೇಪವಾಗಿರುವುದು ಇಲ್ಲಿ ಗಮನಾರ್ಹ ಅಷ್ಟೇ ಅಲ್ಲದೆ, ನೀಗ್ರೊ ಜನಾಂಗದ ನಿಜಸ್ಥಿತಿಯನ್ನು ಅವನು ತನ್ನ ಸಾಹಿತ್ಯದಲ್ಲಿ ಪ್ರತಿಬಿಂಬಿಸಲಿಲ್ಲ ಎಂಬುದಷ್ಟೇ ಆ ಆಕ್ಷೇಪಕ್ಕೆ ಕಾರಣವಾಗಿರಲಿಲ್ಲ ವೆಂಬುದು ಇಲ್ಲಿ ಇನ್ನೊಂದು ಮುಖ್ಯ ಸಂಗತಿ. ಜೊತೆಗೆ ನೀಗ್ರೊಗಳಿಗ ಬಿಳಿಯರು ಪ್ರತಿಪಾದಿಸುವ ಉಪ-ಮಾನವ (sub-human) ತತ್ತ್ವವನ್ನು ಅವನು ಆರಾಧಿಸ ತೊಡಗಿದ ಬಳಿಕ, ನೀಗ್ರೊ ಲೇಖಕರು ಅವನ ಬಗ್ಗೆ ಎತ್ತಿದ್ದ ಆಕ್ಷೇಪ ಬರಿಯ ಕಪ್ಪು ಸಾಹಿತ್ಯ ವಲಯಕ್ಕಷ್ಟೇ ಸೀಮಿತವಾಗಿ ನಿಲ್ಲಲೂ ಇಲ್ಲ. ಮೂಲ ಭೂತವಾಗಿ ಸಾಹಿತ್ಯ ಕಲೆಯಲ್ಲಿನ ಅವನ ಪ್ರಾಮಾಣಿಕತೆಯನ್ನು ಕರಿಯ ಲೇಖಕರಿಗಿಂತಲೂ ಬಿಳಿಯ ಲೇಖಕರೇ ತೀವ್ರವಾಗಿ ಅನುಮಾನಿಸತೊಡಗಿದರು : "See for example, his novella 'Bright and Morning star' written in the thirties while he was still a communist, where even the communists are suspect and untrustworthy"[2]. ಹೀಗೆ ಕಮ್ಯೂನಿಸಂನ ಕೇವಲ ಆರ್ಥಿಕ ಸಿದ್ಧಾಂತದ

1 Native sons. P. 66 (Ed) Edward Morgolies

2 Ibid. P. 68

ಮಾರುಹೋಗಿ, ತನ್ಮೂಲಕ ಶಬ್ದ ಕಲೆಯ ಸಾಧ್ಯತೆಗಳಿಗೆ ಅನಗತ್ಯವೂ ಕೃತಕವೂ ಆದ ಮಿತಿಗಳನ್ನು ಒಡ್ಡುವ ಮೂಲಕ ಸೈದ್ಧಾಂತಿಕವಾಗಿ ಒಂದು ರೀತಿಯ ಡೋಲಾಯ ಮಾನ ಸ್ಥಿತಿಯನ್ನು ತಲುಪಿರುವ ರಿಚರ್ಡ್ ರೈಟ್‌ನಂಥ ಇನ್ನೂ ಹಲವಾರು ಮಂದಿ ನೀಗ್ರೊ ಲೇಖಕರನ್ನು ಕಾಣಬಹುದಾಗಿದೆ.

೨

ಇನ್ನು ಈ ಹಿಂದೆಯೇ ಸೂಚಿಸಿರುವಂತೆ ನೀಗ್ರೊ ಸಾಹಿತ್ಯವನ್ನು ಪ್ರವೇಶಿಸುವ ಮೊದಲು ಪ್ರಾತಿನಿಧಿಕವಾಗಿ ಕೆಲವು ಪಾಶ್ಚಾತ್ಯ ಕೃತಿಗಳನ್ನು ಕುರಿತಂತೆ ತುಂಬಾ ಸ್ಥೂಲವಾಗಿಯಾದರೂ ಒಂದು ಅವಲೋಕನವನ್ನು ಈ ಭಾಗದಲ್ಲಿ ಮಾಡಬಹುದಾಗಿದೆ. ಅಂದರೆ ನಿರ್ದಿಷ್ಟವಾಗಿ ಹೇಳುವುದಾದರೆ, ಪಾಶ್ಚಾತ್ಯ ನಾಟಕಗಳಲ್ಲಾಗಲಿ ಅಥವಾ ಮಹಾಕಾವ್ಯಗಳಲ್ಲಾಗಲಿ ಗುಲಾಮಗಿರಿಯನ್ನು ಕುರಿತ ವೈಭವೀಕರಣವಾಗಲಿ ಅಥವಾ ಸಮರ್ಥನೆಯಾಗಲಿ ಇರಲು ಸಾಧ್ಯವೇ ಎಂಬ ಬಗ್ಗೆ ಒಂದು ಸಣ್ಣ ಅವಲೋಕನವನ್ನು ಇಲ್ಲಿ ಮಾಡಲಾಗಿದೆ. ಲೋಕದ ಸಾಹಿತ್ಯ ಚರಿತ್ರೆಯಲ್ಲಿನ ಕೆಲವು ಜನಜನಿತ ಸಂಗತಿ ಗಳೆಂದರೆ, ಪಾಶ್ಚಾತ್ಯ ಸಾಹಿತ್ಯದ ಮೂಲ ಪುರುಷರು ಗ್ರೀಕರು. ಲೋಕದ ಸಕಲ ಜ್ಞಾನಶಾಖೆಗಳ ಅಗ್ರಗಣ್ಯ ಬುದ್ಧಿ ಜೀವಿಗಳು ಅಲ್ಲಿನ ಕವಿಗಳು ಹಾಗೂ ನಾಟಕಕಾರರು. ಪ್ರಾಚೀನ ಅಥೆನ್ಸ್ ನಗರ ಇಡೀ ಪಾಶ್ಚಾತ್ಯ ಪ್ರಪಂಚದ ಸಾಹಿತ್ಯದ ಜನ್ಮಭೂಮಿ. ಎಂತಲೇ ವರ್ಜಿಲ್ ಮತ್ತು ಹೋಮರರ ಮಹಾ ಕಾವ್ಯಗಳ ವಸ್ತುಗಳನ್ನು ಕುರಿತ ಒಂದು ಸ್ಥೂಲ ಸಾಮಾಜಿಕ ಅವಲೋಕನ ಪ್ರಸ್ತುತ ಅಪೇಕ್ಷಣೀಯ. ಏಕೆಂದರೆ, ದೇವತೆಗಳು ಮತ್ತು ಮಾನವರ ನಡುವಿನ ಒಂದು ಅವಿಚ್ಛಿನ್ನ ಸಂಘರ್ಷ ಈ ಮಹಾ ಕಾವ್ಯಗಳ ಮೂಲವಸ್ತುವೆನಿಸಿಸುತ್ತದೆ. ಗ್ರೀಕರಿಗೂ ಟ್ರೋಜನರಿಗೂ ನಡೆದ ಘೋರ ಕದನವೂ ಇದಕ್ಕೆ ನಿದರ್ಶನ. ಬಹಳವೆಂದರೆ, ಅಂಥ ಸಂಘರ್ಷ ಅಥವಾ ಯುದ್ಧಗಳಲ್ಲಿ ಮರಣಹೊಂದಿದ ವೀರರನ್ನು ಅಗೌರವದಿಂದ ಕಾಣದೆ ಅವರಿಗೆ ಗೌರವಪೂರ್ವಕ ವಾಗಿಯೂ ವೀರೋಚಿತವಾಗಿಯೂ ಶವಸಂಸ್ಕಾರವನ್ನೇರ್ಪಡಿಸುವುದು ಒಂದು ಮಹತ್ವದ ಸಾಂಸ್ಕೃತಿಕ ಮೌಲ್ಯವಾಗಿರುವುದನ್ನು ಕೂಡ ಈ ಮಹಾಕಾವ್ಯದಲ್ಲಿ ಕಾಣ ಬಹುದಾಗಿದೆ. ಅಂದರೆ, ಪಾಶ್ಚಾತ್ಯರಲ್ಲಿನ ಗುಲಾಮಗಿರಿ ಈ ಮಹಾಕಾವ್ಯದಲ್ಲಿ ಎಡೆ ಪಡೆದಿಲ್ಲದಿರುವುದು ಇಲ್ಲಿ ತುಂಬಾ ಗಮನಾರ್ಹವಾದ ವಿಷಯ*. ಅದೇ ವೈದಿಕ ಧರ್ಮದಲ್ಲೂ ಕನ್ನಡ ಮಹಾಕಾವ್ಯಗಳಲ್ಲೂ ಅಸ್ಪೃಶ್ಯತೆ, ಮೇಲು-ಕೀಳು ಮತ್ತು ಮಾನವ ಗುಲಾಮಗಿರಿಯೇ ಮುಂತಾದುವುಗಳೆಲ್ಲ ಬಹುತೇಕ ಎಲ್ಲ ಕಾಲಘಟ್ಟಗಳ ಕೃತಿಗಳಲ್ಲೂ ಎಡೆಪಡೆದು ವಿಜೃಂಭಿಸುತ್ತ ನಡೆದುಬಂದಿರುವುದನ್ನು ಕಾಣಬಹುದಾಗಿದೆ. ಅಲ್ಲದೆ ಪಾಶ್ಚಾತ್ಯ ಗುಲಾಮಗಿರಿ ಕೇವಲ ವ್ಯಾವಹಾರಿಕವಾದುದು. ಅದೇ ವೈದಿಕ ಧರ್ಮದ ಅಸ್ಪೃಶ್ಯತೆ ಹಾಗೂ ಅದರ ಫಲವಾದ ಗುಲಾಮಗಿರಿ ಸಂಸ್ಕೃತ ಮೂಲದ್ದು ಹಾಗೂ ಧಾರ್ಮಿಕ ಮನ್ನಣೆಯನ್ನು ಪಡೆದಿರುವುದು.

---

*ಪಾಶ್ಚಾತ್ಯ ಮಹಾಕಾವ್ಯಗಳು (ಸಂ.) ಡಾ. ಶ್ರೀಕಂಠ ಕೂಡಿಗೆ

ಸಾಹಿತ್ಯದ ಸಾಮಾಜಿಕ ಜವಾಬ್ದಾರಿಯ ಅನಿವಾರ್ಯತೆಯನ್ನು ಕುರಿತ ಪ್ರಾಚೀನ ಗ್ರೀಕ್ ಸಾಹಿತ್ಯದ ಮೂವರು ಮಹಾ ಕವಿಗಳಾದ ಈಸ್ಕಲಸ್, ಸಾಫೋಕ್ಲಸ್ ಮತ್ತು ಯುರಿಪಿಡೀಸರಲ್ಲಿ ಈಸ್ಕಲಸ್ ಮತ್ತು ಯುರಿಪಿಡೀಸರ ನಡುವೆ ನಡೆಯುವ ಸಂಭಾಷಣೆಯಲ್ಲಿನ ಒಂದು ಪ್ರಸಂಗ ಇಲ್ಲಿ ಚಿಂತನೀಯ.

ಈಸ್ಕಲಸ್ :

"What are the qualities that
you look for in a good poet ?

ಯುರಿಪಿಡೀಸ್ :

"Technical skill - and he should teach a lesson,
make people into better citizens"[1]

ಅಂದರೆ, ಈ ಕವಿಗಳ ಸಮಸ್ತ ಅಭಿವ್ಯಕ್ತಿಯ ಮೂಲೋದ್ದೇಶ ಒಂದು ರಾಷ್ಟ್ರದ ಆತ್ಮಸ್ಥೈರ್ಯವನ್ನು ಉತ್ತುಂಗಕ್ಕೆ ಕೊಂಡೊಯ್ದು, ತಮ್ಮ ಕಾವ್ಯಗಳ ಮೂಲಕ ಜನತೆಯನ್ನು ಸತ್ಪ್ರಜೆಗಳನ್ನಾಗಿಸುತ್ತಾ, ತನ್ಮೂಲಕ ತಮ್ಮ ಸಮಾಜಕ್ಕೆ ಘನತೆ ಮತ್ತು ಸದ್ಗುಣಗಳನ್ನು ತರುವುದಾಗಿದೆ ಎಂಬುದನ್ನು ಸಾಫೋಕ್ಲಸ್, ಯುರಿಪಿಡೀಸ್ ಮತ್ತು ಈಸ್ಕಲಸರ ಸ್ವತಃ ಕಾವ್ಯಗಳಲ್ಲೇ ಕಾಣಬಹುದಾಗಿದೆ. ಆದರೆ ಸಾಮಾಜಿಕ ವೈಷಮ್ಯದ ನಡುವೆಯೇ ವಿಕಸನಗೊಂಡ ಪಂಪ ಕುಮಾರವ್ಯಾಸರಂಥ ಕವಿಗಳ ಕಾವ್ಯಗಳು ಸಾಮಾಜಿಕವಾಗಿ ಈ ಬಗೆಯ ಉಚ್ಚ ಆದರ್ಶಗಳಿಂದ ಹೇಗೆ ಹೊರತಾಗಿ ನಿಲ್ಲುತ್ತವೆ ಎಂಬುದನ್ನು ಈ ಹಿಂದಿನ ಅಧ್ಯಾಯಗಳಲ್ಲಿ ತೋರಿಸಿಕೊಡಲಾಗಿದೆ.

ಮಾನವನಲ್ಲಿ ಶೌರ್ಯ, ಸಾಹಸ, ಸಾಧನೆಗಳ ಮಹದಾಕಾಂಕ್ಷೆಗಳನ್ನು ನೆಲೆಗೊಳಿಸುವ ಮೂಲಕ ಮನುಷ್ಯನ ಜೀವನಮೌಲ್ಯಗಳನ್ನು ಮಹೋನ್ನತ ಮಟ್ಟದಲ್ಲಿ ಪ್ರತಿಷ್ಠಾಪಿಸಿದುದೇ ಬಹುತೇಕ ಎಲ್ಲ ಪಾಶ್ಚಾತ್ಯ ಮಹಾಕಾವ್ಯಗಳ ಪರಮಧ್ಯೇಯವೆಂಬುದನ್ನು ಹೋಮರ್ ಮತ್ತು ವರ್ಜಿಲರ್ 'ಇನಿಯಡ್' 'ಒಡಿಸಿ' ಮತ್ತು 'ಈಲಿಯಡ್' ಮಹಾಕಾವ್ಯಗಳಿಂದಲೂ ತಿಳಿಯಬಹುದಾಗಿದೆ. ಪತನಗೊಂಡ ಟ್ರಾಯ್ ಸಾಮ್ರಾಜ್ಯದ ವಯೋವೃದ್ಧ ದೊರೆ ಪ್ರಯಾಮ್ ಮತ್ತು ಅವನ ಮಗನನ್ನು ಅಟ್ಟಿಸಿಕೊಂಡು ಹೋಗಿ ಕೊಚ್ಚಿ ಹಾಕಿದ ಗ್ರೀಕ್‌ನ ಮಹಾನ್ ವೀರ ಅಖಿಲಸ್‌ನ ಮಗ ನಿಪ್ಟೊಲೆಮಸ್‌ನ ರಕ್ತ ಪಿಪಾಸಿ ರೋಷವನ್ನು ಕುರಿತು ಕವಿ ಹೀಗೆ ಹೇಳುತ್ತಾನೆ : 'ನಿನ್ನ ರೋಷ ಅಥವಾ ದುಃಖಕ್ಕೆ ಏನೇ ಕಾರಣವಾಗಿದ್ದರೂ ಇಂಥ ಉರುಡು ಕೋಪವೇಕೆ ಮಗು.... ಟ್ರಾಯ್ ಸಾಮ್ರಾಜ್ಯದ ವಿನಾಶಕ್ಕೆ ಹೆಲನ್‌ಳ ದುಷ್ಟ ಸೌಂದರ್ಯ ಕಾರಣವಲ್ಲ.

---

1, David Parrett Penguin classic series,
Aristophanes p, 193-1964

ಅಥವಾ ಪ್ಯಾರಿಸ್ ಕೂಡ ನಿಮ್ಮ ವಿನಾಶಕ್ಕೆ ಕಾರಣವಲ್ಲ. ಇದ್ದರಿಂದ ಅವರನ್ನು ನಿಂದಿಸಲು ಕಾರಣವೇ ಇಲ್ಲ. ಕಾರಣವಿಷ್ಟೆ, ದೇವತೆಗಳಿಗೆ ನಿಮ್ಮ ಮೇಲೆ ಕರುಣೆ ಇಲ್ಲ ಅಷ್ಟೆ. ಹಾಗೆ ನೋಡಿದರೆ, ಟ್ರಾಯ್‌ನ ವೈಭವವನ್ನು ಅದರ ಸಮಸ್ತ ಅಧಿಕಾರವನ್ನೂ ಈಗ ನಾಶಪಡಿಸುತ್ತಿರುವವರು ಆ ದೇವತೆಗಳೇ ಎಂಬುವನ್ನು ನೀನು ಅರಿಯಬೇಕು[1]". ಹಾಗಾಗಿ, ಟ್ರಾಯ್, ಅಥೆನ್ಸ್ ಮತ್ತು ಅಲೆಕ್ಸಾಂಡ್ರಿಯಗಳ ಪ್ರಾಚೀನ ಪಟ್ಟಣ ಸಾಮ್ರಾಜ್ಯಗಳ ವೈಭವದಿಂದ ಹಿಡಿದು ಅವುಗಳ ಪತನದವರೆಗೂ ಚಿತ್ರಿಸುವ ವರ್ಜಿಲ್ ಮತ್ತು ಹೋಮರ್‌ನ ಮಹಾಕಾವ್ಯಗಳಲ್ಲಿ ದೇವತೆಗಳು ಹಾಗೂ ಮಾನವರ ನಡುವಿನ ಸಂಘರ್ಷ, ವಿಧಿ ನಿರ್ಣಯ, ದುರಾದೃಷ್ಟ, ಪರಾಕ್ರಮ, ಈ ಮುಂತಾದವೇ ಅವರ ಸಮಸ್ತ ಕಾವ್ಯಗಳಲ್ಲಿ ಸ್ಥಾಯೀಭಾಗಗಳಾಗಿದ್ದು ಗುಲಾಮಗಿರಿಯ ವರ್ಣನೆಯಾಗಲಿ, ಅವುಗಳ ಸಮರ್ಥನೆಯಾಗಲಿ ಇಲ್ಲಿ ಕಾಣಬರುವುದಿಲ್ಲ. ಅಂದರೆ, ಈ ಸಾಮ್ರಾಜ್ಯಗಳಲ್ಲಿ ಗುಲಾಮಗಿರಿ ಅಲ್ಲಿ ಒಂದು ವಿಧಿ ನಿಯಮವಲ್ಲ. ಅಲ್ಲದೆ ಅದಕ್ಕೆ ಧರ್ಮದ ಸಮರ್ಥನೆಯಂತೂ ಇರಲೇ ಇಲ್ಲ ಎಂದಷ್ಟೇ ಇದರ ಅರ್ಥ. ಇಡೀ ಮಾನವ ಜನಾಂಗದ ಜೀವನ ಸಂಸ್ಕೃತಿಯನ್ನು ಉತ್ತರೋತ್ತರಕ್ಕೆ ಕೊಂಡೊಯ್ಯುವುದ ರಿಂದಲೇ ಪಾಶ್ಚಾತ್ಯ ಕಾವ್ಯಗಳು ಇಂದು ಪ್ರಪಂಚದ ಸಾಂಸ್ಕೃತಿಕ ಮಾದರಿಗಳು ಎನಿಸಲು ಸಾಧ್ಯವಾಗಿರುವಂತೆ ತೋರುತ್ತದೆ. ನಿದರ್ಶನಕ್ಕೆ ಹೋಮರನ ಒಡಿಸ್ಸಿ ಮಹಾಕಾವ್ಯದ ಸರ್ವಜನಾದರಣೀಯ ಗುಣವನ್ನೂ ಅದರ ವಸ್ತುವಿನ ಸಾರ್ವಕಾಲಿಕತೆಯನ್ನು ಕುರಿತಂತೆ ಮಿಲ್ಟನ್ ಮೇಯರ್ ಹೀಗೆ ಹೇಳುತ್ತಾನೆ. "There is no ancient man and there is no modern man. The trappings have changed. But men work and pray, love and hate, fight, dream, scheme and sacrifice today or yesterday and the day before, and live and die with or without the same ideals. Odessey portrays the struggle, between the security and enterprise ideologies in the heart of man, who like all men, at once craves both safety and adventure. The mark of a great book is its timelessness. Odessey's journey is the journey of man."

ಹಾಗೆ ನೋಡಿದರೆ ಹೋಮರ್‌ನ ಮಹಾಕಾವ್ಯದ ಲೋಕದಲ್ಲಿ ದೇವತೆಗಳಿ ಗಿಂತಲೂ ಮನುಷ್ಯ ಬಹು ದೊಡ್ಡವನು. ದೇವತೆಗಳೆಂಬ ಅವ್ಯಕ್ತ ಶಕ್ತಿಗಳ ದೌರ್ಜನ್ಯಕ್ಕೆ ಸಿಲುಕಿ ಅತ್ಯಂತ ಯಾತನಾಮಯವಾದ ಬದುಕಿಗೆ ದೂಡಲ್ಪಟ್ಟರೂ ಅತ್ಯಂತ ಘನತೆ ಗಾಂಭೀರ್ಯಗಳನ್ನು ಉಳಿಸಿಕೊಳ್ಳುವ ಮನುಷ್ಯನ ಬಗೆಗೆ ಹೋಮರ್ ಮಹಾಕವಿಗೆ ಅಪಾರವಾದ ಅನುಕಂಪ ಮತ್ತು ಮೆಚ್ಚುಗೆಯಿದೆ. ಎಂತಲೆ, ಹೋಮರ್ ಹೆಕ್ಟರನ

1. Virgil, Aeneid. Book II Lines 590-602

ಪಾತ್ರವನ್ನು ಚಿತ್ರಿಸಿರುವ ರೀತಿ ಅಸನ್ಯವಾಗಿದೆ. ಏಕೆಂದರೆ ಹೆಕ್ಟರ್ ಅಖಿಲಸ್‌ನಂತೆ ದೇವಮಾನವನಲ್ಲ. ಅವನೊಬ್ಬ ಸಾಮಾನ್ಯ ಮಾನವ ವ್ಯಕ್ತಿ. ಒಬ್ಬ ಧೀರೋದಾತ್ತ ವೀರನಿಗಿರಲೇಬೇಕಾದ ಸಕಲ ಗುಣಗೂ ಅವನಲ್ಲಿವೆ. ಟ್ರೋಜನ್ ಮಹಾಸೇನೆಯ ಯೋಧನಾಗಿ, ಒಬ್ಬ ತಂದೆಯಾಗಿ, ಮತ್ತು ಒಂದು ಸಾಮ್ರಾಜ್ಯದ ಹೊಣೆಗಾರಿಕೆಯನ್ನು ಹೊತ್ತ ಒಬ್ಬ ಮುತ್ಸದ್ದಿಯಾಗಿ ಅವನು ತುಂಬಾ ಉದಾತ್ತನಾಗಿ ನಡೆದುಕೊಳ್ಳುತ್ತಾನೆ. ಅಂದರೆ ಮನುಷ್ಯ ತನ್ನ ಬದುಕಿಗೆ ತಾನು ಜವಾಬ್ದಾರನೇ ಹೊರತು, ದೇವತೆಗಳಲ್ಲ ಎಂಬ ಸಿದ್ಧಾಂತವನ್ನು ಹೋಮರ್ ತನ್ನ ಕಾವ್ಯದಲ್ಲಿ ನೆಲೆಗೊಳಿಸಿದ್ದಾನೆ. ಬಹುಶಃ ಅವನ ಕಾವ್ಯದಲ್ಲಿ ಗುಲಾಮಗಿರಿಯಂಥ ಪದ್ಧತಿಯ ವೈಭವೀಕರಣವಾಗಲಿ, ಅದಕ್ಕೆ ಸಮರ್ಥನೆಯಾಗಲಿ ಇಲ್ಲದಿರುವುದಕ್ಕೆ ಅವನ ವೈಚಾರಿಕ ನಿಲುವೇ ಒಂದು ಪ್ರಬಲ ಕಾರಣವಿರಬೇಕೆಂದು ತೋರುತ್ತದೆ. ಆದರೆ ಒಂದು ಮಾತು ಮಾತ್ರ ಸತ್ಯ. ಅದೆಂದರೆ, ಪಾಶ್ಚಾತ್ಯ ಕಾವ್ಯಗಳು ಬರಿಯ ಯುದ್ಧಗಳಿಂದ ತುಂಬಿ ಹೋಗಿದೆ ಆದಾಗ್ಯೂ ಅಲ್ಲಿ ಜೀವನ ಸೌಂದರ್ಯವೂ ತುಂಬಿದೆ ಎಂಬುವದನ್ನು ಮರೆಯುವಂತಿಲ್ಲ. ಅದನ್ನೇ ವಿಲ್ ಡುರಾಂಟ್ ಹೇಗೆ ಹೇಳುತ್ತಾನೆ : "We know that war is ugly and that Iliad is beautiful"[1].

ಅಷ್ಟೇ ಅಲ್ಲದೆ, ವರ್ಜಿಲ್ ಮತ್ತು ಹೋಮರರಲ್ಲಿ ಎಂತೋ, ಅಂತೆಯೇ, ಅತ್ಯಂತ ಪ್ರಾಚೀನ ನಾಟಕಕಾರರಾದ ಈಸ್ಕಲಸ್, ಸಾಫೋಕ್ಲಿಸ್, ಮತ್ತು ಯುರಿಪಿಡೀಸ್‌ರ ನಾಟಕಗಳಲ್ಲಿ ಕೂಡ ದೇವತೆಗಳಿಗೂ ಮಾನವನಿಗೂ ನಡೆಯುವ ಒಂದು ಅವಿಚ್ಛಿನ್ನ ಸಂಘರ್ಷವೇ ಪ್ರಧಾನವಾಗಿರುವುದನ್ನು ಕಾಣಬಹುದಾಗಿದೆ. ಅದರಲ್ಲೂ ವಿಧಿಯ ಪೂರ್ವ ನಿರ್ಣಯ, ದುರಾದೃಷ್ಟವೇ ಮುಂತಾದ ವಿಷಯಗಳಿಗೆ ಈಸ್ಕಲಸ್‌ನ ದೊರೆ 'ಈಡಿಪಸ್' ನಾಟಕದ ವಸ್ತುವನ್ನಾಗಲಿ, ಯುರಿಪಿಡೀಸ್‌ನ 'ಮೀಡಿಯಾ' ನಾಟಕದ ವಸ್ತುವನ್ನಾಗಲಿ ಈ ಸಂದರ್ಭದಲ್ಲಿ ನಿರ್ದಿಷ್ಟ ನಿದರ್ಶನಗಳನ್ನಾಗಿಯೇ ಸೂಚಿಸಬಹುದಾಗಿದೆ.

ಆದ್ದರಿಂದ ಈ ಮಾತುಗಳ ಹಿನ್ನೆಲೆಯಲ್ಲಿ ಮುಖ್ಯ ವಿಷಯವನ್ನು ಕುರಿತ ಪ್ರತಿಪಾದನೆಯೆಂದರೆ ಪಾಶ್ಚಾತ್ಯ ಸಾಹಿತ್ಯದ ಪ್ರಾಚೀನ ಯುಗದ ಯಾವ ಮಹಾಕವಿಯಲ್ಲೂ ವರ್ಣವಿದ್ವೇಷ ಹಾಗೂ ಗುಲಾಮಗಿರಿಯನ್ನು ಕುರಿತ ವೈಭವೀಕರಣವನ್ನಾಗಲಿ ಅವುಗಳಿಗೆ ಸಮರ್ಥನೆಯನ್ನಾಗಲಿ ಕಾಣಲು ಸಾಧ್ಯವಿಲ್ಲವೆಂಬುದನ್ನು ವಿಶೇಷವಾಗಿ ಪರ್ಯಾಲೋಚಿಸಬೇಕಾಗಿದೆ ಎಂದೆನಿಸುತ್ತದೆ. ಬಹುಶಃ ಇದರರ್ಥವಿಷ್ಟೆ, ಪಾಶ್ಚಾತ್ಯದಲ್ಲಿನ ವರ್ಣವಿದ್ವೇಷವಾಗಲಿ ಗುಲಾಮಗಿರಿಯಾಗಲಿ ಡಾ. ಅಂಬೇಡ್ಕರರು ಹೇಳುವ ಹಾಗೆ ಕೇವಲ ವ್ಯಾವಹಾರಿಕವಾದುದೆ ಹೊರತು ಧಾರ್ಮಿಕವಾದುದಲ್ಲ ಎಂಬುದನ್ನು ಮನನ ಮಾಡಬೇಕಾಗುತ್ತದೆ. ಒಂದುವೇಳೆ ಈ ಎರಡು ಪದ್ಧತಿಗಳು ಧಾರ್ಮಿಕವಾದುವಾಗಿದ್ದ

---

1. Will Durant. Life of Greece. Chap. 3 P. 56

ಪಕ್ಷದಲ್ಲಿ ಕೊನೆಯ ಪಕ್ಷ ಮಧ್ಯಯುಗದ ನಂತರದ ಪಾಶ್ಚಾತ್ಯ ಸಾಹಿತ್ಯದ ದೈತ್ಯ ಪ್ರತಿಭಾವಂತನಾದ ಶೇಕ್ಸ್‌ಪಿಯರ್‌ನಲ್ಲಾದರೂ ಆದರ ಪ್ರಸ್ತಾಪವನ್ನೋ ಆ ಕುರಿತ ವೈಭವೀಕರಣವನ್ನೋ ಅಥವಾ ಕನ್ನಡದ ದುರ್ಗಸಿಂಹ ಕುಮಾರವ್ಯಾಸರಂತೆ ಅವನ್ನು ಕುರಿತಂತೆ ಕೀರ್ತಿಸುವುದನ್ನೋ ಕಾಣಬಹುದಾಗಿತ್ತು. ಬದಲಾಗಿ ಶೇಕ್ಸ್‌ಪಿಯರ್ ತನ್ನ ಸಾಹಿತ್ಯದಲ್ಲಿ ಸೃಷ್ಟಿಸಿದ ಎರಡು ಮಹೋನ್ನತ ಕಪ್ಪು ಪಾತ್ರಗಳೆಂದರೆ, ಒಂದು ಒಥೆಲೊ ಇನ್ನೊಂದು ಅವನ ಬದುಕಿನ ನಾಡಿಯನ್ನೇ ಬದಲಿಸಿದ ಅವನ ಸಾನೆಟ್‌ನಲ್ಲಿ ಬರುವ ಕಪ್ಪು ಮಹಿಳೆ ಅಥವಾ Dark Lady. ಅಂತೆಯೇ ಈ ಎರಡು ಪಾತ್ರಗಳನ್ನು ಕುರಿತ ಒಂದು ಸ್ಥೂಲ ವಿವೇಚನೆಯಲ್ಲಿ ಕೈಗೆತ್ತಿಕೊಳ್ಳಬಹುದಾಗಿದೆ.

ತನ್ನ ಅಮೋಘ ಸೃಷ್ಟಿಯಾದ ಒಥೆಲೊ ಪಾತ್ರದ ಮೂಲಕ ಶೇಕ್ಸ್‌ಪಿಯರ್‌ನಲ್ಲಿ ಕಪ್ಪು ಜನಾಂಗದ ಬಗೆಗೆ, ತನ್ನ ತಾನೇ ಸೃಷ್ಟಿಯಾದ ಉದಾತ್ತ ಧೋರಣೆಯ ಸ್ವರೂಪವನ್ನು, 'ಒಥೆಲೊ' ನಾಟಕದ ಕೆಲವು ಪ್ರಸಂಗಗಳ ಹಾಗೂ ಅವನ ಕೆಲವು ಸಾನೆಟ್‌ಗಳನ್ನು ಕುರಿತ ಒಂದು ಸ್ಥೂಲ ಅವಲೋಕನದಿಂದ ತಿಳಿಯಲೆತ್ನಿಸಬಹುದಾಗಿದೆ.

ಆಬಾಲ್ಯ ಶೌರ್ಯಮಿತ್ರನೂ ಸಾಹಸಪ್ರಿಯನೂ ಯುದ್ಧ ಕುಶಲಿಯೂ ಆದ ಒಥೆಲೊನಲ್ಲಿ ಒಂದು ಅಸಾಧಾರಣವಾದ ವ್ಯಕ್ತಿತ್ವವನ್ನು ಅನುಪಮವಾದ ಆತ್ಮವನ್ನೂ ಜೋಡಿಸಿದ ಶೇಕ್ಸ್‌ಪಿಯರ್, ತನ್ನ ಅನ್ಯ ನಾಲ್ಕು ಗಂಭೀರ ನಾಟಕಗಳಲ್ಲಿ ಕಾಣಲಾಗದ ಮಾನವ ಸಂಸರ್ಗವನ್ನೂ, ಮನುಷ್ಯ ಸಹಜವೆನಿಸುವ ರಾಗದ್ವೇಷಾದಿಗಳನ್ನೂ ಅವನಲ್ಲಿ ಕಡೆದು ನಿಲ್ಲಿಸುವ ಮೂಲಕ, ಒಥೆಲೊ ನಾಟಕವನ್ನು ಒಂದು ಅನ್ಯಾದೃಶ ಕೃತಿಯನ್ನಾಗಿಯೂ ಮಾಡಿದ್ದಾನೆ. ಆ ಬಗ್ಗೆ ಮಾರ್ಗ್ರೇಟ್ ವೆಬ್‌ಸ್ಟರ್ ಹೇಳುವ ಮಾತು ಹೀಗಿದೆ "Othello is the most human of the four great tragedics... The play is an astounding extension of normal humanity to the level of high poetic tragedy"[1] ಆದ್ದರಿಂದಲೇ ಒಥೆಲೊ ಒಬ್ಬ ಕಪ್ಪು ಬಣ್ಣದ ವ್ಯಕ್ತಿ ಎಂಬ ಕಾರಣದಿಂದಾಗಿ ಆ ನಾಟಕದ ಶ್ರೇಷ್ಠತೆಯನ್ನು ಅಲ್ಲಗಳೆಯುವುದಾಗಲಿ, ತನ್ಮೂಲಕ ಶೇಕ್ಸ್‌ಪಿಯರ್‌ನ ದೈತ್ಯ ಪ್ರತಿಭೆಯ ಅನನ್ಯ ಸೃಷ್ಟಿಯಾದ ಒಥೆಲೊ ಪಾತ್ರದ ಗಹನತೆಯನ್ನೂ ಹುಸಿಗೊಳಿಸುವ ವಿಮರ್ಶೆಗಳನ್ನಾಗಲಿ ಇದುವರೆಗಿನ ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯಲ್ಲಿ ಕಾಣಲಾಗುವುದಿಲ್ಲ. ಬದಲಾಗಿ ಅವನು ಕಪ್ಪು ವರ್ಣೀಯ ಎಂಬುದಕ್ಕೆ ಡೌಡನ್‌ನಂಥ ವಿದ್ವಾಂಸರು ಮಾಡುವ ವ್ಯಾಖ್ಯಾನ ಕೂಡ ತುಂಬಾ ಯಥಾರ್ಥವಾದುದು ಎಂದೆನಿಸುತ್ತದೆ. " I do not think we need greatly concern ourselves as to Othello's darkness; with Desdtimona we may see his image in his mind; and however Swarthy, we may imagine him as noble in features." ಎಂತಲೇ

1. M. Webster. Shakespear Today p. 231
2. Dowen Edward. Shaskepear. B. 845

ವ್ಯಕ್ತಿಯ ಉದಾತ್ತತೆ ಗಣನೀಯವೇ ಹೊರತು ಅವನ ವರ್ಣ ಅಥವಾ ಜಾತಿಯಲ್ಲ ಎಂಬ ಪಾಶ್ಚಾತ್ಯಸಾಹಿತ್ಯದ ಧೋರಣೆಯನ್ನು ಇಂಥಲ್ಲಿ ಗುರುತಿಸಬಹುದಾಗಿದೆ.

ಈ ಮೊದಲೇ ಒಂದು ಮಾತಿನಲ್ಲಿ ಸೂಚಿಸಿರುವಂತೆ ಮೂಲತಃ ಹೋರಾಟದ ಬದುಕಿನ ಒಥೆಲೊ ಒಬ್ಬ ಯೋಧನಾಗಿ ತನಗೇ ಸಹಜವಾದ ಶೌರ್ಯ ಹಾಗೂ ಪರಾಕ್ರಮದ ಜೀವನದ ಹಾದಿಯಲ್ಲಿ, ಡೆಸ್ಡಿಮೋನ ಸಹಜಾಕಸ್ಮಿಕವಾಗಿಯೂ ಆಕರ್ಷಿತಳಾಗಿಯೂ ಬಂದವಳೇ ಹೊರತು, ಒಥೆಲೊ ಅವಳನ್ನೆಂದೂ ವಂಚಿಸಿಯೋ ಅಥವಾ ಅಪಹರಿಸಿಯೊ ಒಲಿಸಿಕೊಂಡವನಲ್ಲ. ಹಾಗಾಗಿ ಡೌಡನ್ ಹೇಳುವಂತೆ ಅವನ ವ್ಯಕ್ತಿತ್ವದ ಉದಾತ್ತತೆಯನ್ನಿಲ್ಲಿ ಕಾಣಬಹುದಾಗಿದೆ. ಅಷ್ಟೇ ಅಲ್ಲದೆ, ಡೆಸ್ಡಿಮೋನಳ ತಂದೆ ಬ್ರಬಾನ್ಷಿಯೊ ಅವರಿಬ್ಬರ ಮದುವೆಗೆ ಒಪ್ಪಿಗೆ ನೀಡಲು ಸಿದ್ಧನಿರುವುದಿಲ್ಲ ವೆಂಬುದು ಸತ್ಯವೇ ಆದರೂ, ಒಥೆಲೊನ ಧೀರೋದಾತ್ತ ವ್ಯಕ್ತಿತ್ವಕ್ಕೆ ಅವನು ಕೂಡ ಮಾರುಹೋಗಿದ್ದನೆಂಬುದು ಸುಳ್ಳಲ್ಲ. ಅದನ್ನು ಸ್ವತಃ ಒಥೆಲೊ ಹೀಗೆ ಹೇಳುತ್ತಾನೆ :

> "Her father lov'd me ; oft invited me
> Still Qtestion'd me, the story of my life
> From year to year, the battles, Sieges fortunes
> That I have pass'd"[1]

ಒಥೆಲೊ ಬ್ರಾಬಾನ್ಷಿಯೊಗೆ ನಿರೂಪಿಸುತ್ತಿದ್ದ ತನ್ನ ಜೀವನದ ವೀರಗಾಥೆ ಯನ್ನು ಮರೆಯಲ್ಲಿ ನಿಂತು ಕದ್ದು ಕೇಳಿಸಿಕೊಂಡಿದ್ದ ಡೆಸ್ಡಿಮೋನ ಅವನ ಸಾಹಸ ಹಾಗು ಪರಿಕ್ರಮ ವ್ಯಕ್ತಿತ್ವಕ್ಕೆ ಮನಸೋಲುತ್ತಾಳೆ. ಅಷ್ಟೆ ಅಲ್ಲದೆ, ಮೂಲತಃ ರಾಜ ವಂಶಸ್ಥನಾದ ಒಥೆಲೊ ಯೋಧನಾಗಿ ಯಾವ ದೇಶಕ್ಕೇ ಹೋದರೂ, ಯುದ್ಧ ವಿಜಯವೂ ಸೇನಾನಾಯಕಪಟ್ಟವೂ ಅವನದೇ ಆಗಿರುತಿತ್ತು. ಆದಾಗ್ಯೂ ಅಹಂಕಾರ ವಿಲ್ಲದೆ, ಹಾಗೂ ಸ್ವಾರ್ಥವಿಲ್ಲದ ವ್ಯಕ್ತಿತ್ವ ಅವನದು. ಅದಾಗಿ ಒಥೆಲೊನ ವೀರ ವ್ಯಕ್ತಿತ್ವಕ್ಕೆ ಬ್ರಬಾನ್ಷಿಯೂ ಮಾರುಹೋದದ್ದು ಮಾತ್ರವಲ್ಲವೆ, ಆ ಸಂದರ್ಭದಲ್ಲಿ ಅವನ ಬಳಿಯಲ್ಲೇ ಇದ್ದ ನಗರಾಧ್ಯಕ್ಷನಾದ ಡ್ಯೂಕ್ ಕೂಡ.

> " I think this tale would win my
> daughter too "

ಎಂಬುದಾಗಿ ಆಶ್ಚರ್ಯ ಪುಳಕಿತನೂ ಕುತೂಹಲಿಯೂ ಆಗುತ್ತಾನೆ. ಅಂದರೆ ಡ್ಯೂಕ್ ವ್ಯಕ್ತಪಡಿಸುವ ಈ ಆಶ್ಚರ್ಯದಲ್ಲಿ ಒಂದೆಡೆಗೆ ಡೆಸ್ಡಿಮೋನ ಒಥೆಲೊಗೆ ಮನಸೋಲುವುದು ಎಷ್ಟರ ಮಾತು ಎಂದೆನಿಸಿದರೆ, ಇನ್ನೊಂದೆಡೆಗೆ ಶೇಕ್ಸ್‌ಪಿಯರ್ ತನ್ನ ನಾಟಕಗಳಲ್ಲಿ ಸೃಷ್ಟಿಸಿದ ಸಮಸ್ತ ಪುರುಷ ಪಾತ್ರಗಳಲ್ಲಿ ಒಥೆಲೊವಿನ ಅಮೋಘ

---

1. Othello. Act I Scene III lines 128-133

ವ್ಯಕ್ತಿತ್ವವನ್ನು ಮೀರಿರುವ ಇನ್ನೊಂದು ಪಾತ್ರವಿರಲಿಕ್ಕೆ ಸಾಧ್ಯವಿಲ್ಲವೆಂಬುದು ಮನವರಿಕೆಯಾಗುತ್ತದೆ. ಅಲ್ಲದೆ, ಶೇಕ್ಸ್‌ಪಿಯರ್‌ನ ಒಥೆಲೊ ಪಾತ್ರ ಸಮಸ್ತ ಪಾಶ್ಚಾತ್ಯ ಸಾಹಿತ್ಯದಲ್ಲಿ ಇನ್ನೆಲ್ಲೂ ಕಾಣಸಿಗದ ಒಂದು ಆತ್ಯಪೂರ್ವ ಕಪ್ಪು ವ್ಯಕ್ತಿತ್ವ ಎಂಬುದನ್ನು ಬಹುಶಃ ಪಾಶ್ಚಾತ್ಯ ಸಮಾಜಗಳ ಸಮಸ್ತ ಕಪ್ಪು ಜನಾಂಗದ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವುದು ಸಾಹಿತ್ಯಕವಾಗಿ ಅರ್ಥಪೂರ್ಣವೆನಿಸಿದರೆ ಸಾಮಾಜಿಕವಾಗಿ ನ್ಯಾಯೋಚಿತವಾದುದು ಎಂದೆನಿಸುತ್ತದೆ. ಜೊತೆಗೆ ಉಚ್ಚ ಸ್ತರದ ವಿವೇಕದಲ್ಲೂ, ಋಜುತ್ವದಲ್ಲೂ, ಗಾಂಭೀರ್ಯದಲ್ಲೂ ಒಥೆಲೊನನ್ನು ಮೀರಿಸುವ ಇನ್ನೊಂದು ಪಾತ್ರ ಶೇಕ್ಸ್‌ಪಿಯರ್‌ನ ಸಮಸ್ತ ಸಾಹಿತ್ಯದಲ್ಲೇ ಕಾಣಸಿಗುವಂತಿಲ್ಲ. ಅಲ್ಲದೆ, ಒಥೆಲೊನಂಥ ಒಂದು ಕಪ್ಪು ವ್ಯಕ್ತಿಯಲ್ಲಿ ಇಂಥ ಒಂದು ಶ್ರೇಷ್ಠ ವ್ಯಕ್ತಿತ್ವವನ್ನು ನಿರ್ಮಾಣಗೈದ ಅದೇ ಶೇಕ್ಸ್‌ಪಿಯರ್, ಇಯಾಗೊನಂಥ ಒಬ್ಬ ಬಿಳಿಯ ವ್ಯಕ್ತಿಯಲ್ಲಿ ಅದೇ ಮಾನವ ಸಹಜವೆನಿಸುವ ಸೈತಾನನ ದೌಷ್ಟ್ಯವನ್ನೂ ನಿರ್ಮಿಸಿದ್ದಾನೆ. ಇಯಾಗೊವಿನ ಕುತಂತ್ರಕ್ಕೆ ಬಲಿಯಾಗಿ ತನ್ನ ಜೀವದ ಗೆಳತಿಯಾದ ಡೆಸ್ಡಿಮೋನಳನ್ನು ಕೊಂದು ತಾನೂ ಆತ್ಮಹತ್ಯೆ ಮಾಡಿಕೊಂಡ ಒಥೆಲೊ, ತನ್ನ ಸಾವಿನ ನಂತರ ತನ್ನ ಸ್ಥಾನಕ್ಕೆ ಇನ್ನೊಬ್ಬ ಅಧಿಕಾರಿಯನ್ನು ತಂದುದನ್ನು ತಿಳಿದು ಇಯಾಗೊ ಬಗ್ಗೆ ಒಥೆಲೊ ಹೀಗೆ ಕೇಳುತ್ತಾನೆ :

"Will you, I pray, demand that demi-devil soul
Why he hath thus ensnored my soul and body ?"[1]

ಬಹುಶಃ ಈ ಯಾವ ದೃಷ್ಟಿಯಲ್ಲಿ ವಿಚಾರ ಮಾಡಿದಾಗ್ಯೂ ಒಥೆಲೊ-ಡೆಸ್ಡಿಮೋನರ ಮದುವೆಯನ್ನು ಕುರಿತ "The marriage of eagle and dove"[2] ಎಂಬ ಕೆಲವು ವಿಮರ್ಶಕರ ಮಾತು ತನ್ನ ತಾನೇ ನಿರರ್ಥಕವೆನಿಸುವುದನ್ನು ಗಮನಿಸಬೇಕು.

ಇನ್ನು ಅದೇ ಶೇಕ್ಸ್‌ಪಿಯರ್‌ನ ಇನ್ನೊಂದು ಸೃಷ್ಟಿಯಾದ ಅವನ ಸಾನೆಟ್‌ನಲ್ಲಿ ಬರುವ ಕಪ್ಪು ಮಹಿಳೆಯ ಬಗೆಗೆ ಕೆಲವೊಂದು ವಿಚಾರಗಳನ್ನು ಗ್ರಹಿಸಬಹುದು.

ಕವಿ ಮತ್ತು ನಟ ಶೇಕ್ಸ್‌ಪಿಯರ್‌ನ ತೀವ್ರ ಯೌವನಾವಸ್ಥೆಯಲ್ಲಿ ಈ ಕಪ್ಪು ಮಹಿಳೆ ಅವನ ಜೀವನವನ್ನು ಪ್ರವೇಶಿಸುತ್ತಾಳೆ. ಶೇಕ್ಸ್‌ಪಿಯರ್‌ನ ಸಾನೆಟ್‌ಗಳ 127, 128, 133 ಮತ್ತು 152–ಇವುಗಳಲ್ಲಿ ಆ ಕಪ್ಪು ಮಹಿಳೆಯ ಪಾತ್ರಚಿತ್ರಣ ತುಂಬಾ ವೈವಿಧ್ಯಮಯವಾಗಿ ಹರಡಿಕೊಳ್ಳುವುದನ್ನು ಕಾಣಬಹುದಾಗಿದೆ. ಮೂಲತಃ ಸಂಗೀತಗಾರ್ತಿಯಾದ ಈ ಮಹಿಳೆ ಕಪ್ಪುವರ್ಣೀಯಳೇ ಆದರೂ ತನ್ನ ವಾದ್ಯ ಸಂಗೀತದ ಕಲಾ ಕೌಶಲದಿಂದ ನಟನಾದ ಶೇಕ್ಸ್‌ಪಿಯರ್‌ನನ್ನು ಅತ್ಯಂತ ಸಹಜವಾಗಿಯೇ

1. Ibid. Act V Scene II Lines 300–301.
2. F. Kreyssing, Qtd.

ಆಕರ್ಷಿಸುತ್ತಾಳೆ. ಎಂತಲೇ ಮೇಲೆ ಸೂಚಿಸಿರುವ ಸಾನೆಟ್‌ಗಳಲ್ಲಿ ಅನ್ಯ ವಿಚಾರಗಳಷ್ಟೇ ಇದ್ದರೂ ಸದ್ಯದ ಉದ್ದೇಶಕ್ಕೆ ಅಂದರೆ, ಶೇಕ್ಸ್‌ಪಿಯರ್‌ನಂಥ ಮಹಾಕವಿ, ಬೆಲೆಹೀನ ರೆಂದು ತಿರಸ್ಕೃತರಾದ ಕಪ್ಪು ಜನಾಂಗದ ಈ ಮಹಿಳೆಯಲ್ಲಿ ಒಂದು ಅರ್ಥಪೂರ್ಣವಾದ ವ್ಯಕ್ತಿತ್ವವನ್ನು ಕಾಣುತ್ತಾನೆ ಎಂಬುದನ್ನು ಗುರುತಿಸಬಹುದಾಗಿದೆ. ಅಂತೆಯೇ, ಆ ವ್ಯಕ್ತಿತ್ವದ ವರ್ಣನೆಯನ್ನು ಈ ಸಾನೆಟ್‌ಗಳಲ್ಲಿ ಕಾಣಬಹುದಾಗಿದೆ. ಶೃಂಗಾರ ಸಾಧನ ಗಳಾದ ವಿಗ್‌ಗಳು, ಮುಖದ ಪೌಡರ್ ಮತ್ತು ತುಟಿ ಬಣ್ಣವೇ ಮೊದಲಾದ ಶೃಂಗಾರದ ಪರಿಸರಗಳನ್ನು ಬಳಿದುಕೊಂಡು, ತೀರಾ ಕೃತಕ ಸೌಂದರ್ಯವನ್ನು ಪ್ರದರ್ಶಿಸುವ ಕೆಲವು ಮಹಿಳೆಯರ ಮನೋಧರ್ಮವನ್ನು ಸಾನೆಟ್ 127 ತುಂಬಾ ಕಟುವಾಗಿ ವಿಡಂಬಿಸುತ್ತದೆ. ಎಂತಲೇ ಕವಿ ತನ್ನ ಕಪ್ಪು ಪ್ರಿಯತಮೆಯ ಸಹಜ ಸೌಂದರ್ಯವನ್ನು ಹೀಗೆ ವರ್ಣಿಸುತ್ತಾನೆ ;

> "Therefore my mistress, eyes are raven black
> Her eyes so suited, and they mourners Seem
> As such who, not born fair, no beauty lack"[1]

ಕಪ್ಪು ವರ್ಣದ ಬಗೆಗೆ ಸಮಕಾಲೀನ ವಿಚಾರಗಳೇ ಬೇರೆ. ಆದರೆ ಶೇಕ್ಸ್‌ಪಿಯರ್‌ಗಿಂತ ಹಿಂದಿನ ಪಾಶ್ಚಾತ್ಯ ಸಾಮಾಜಿಕ ಜೀವನ ಸಂದರ್ಭದಲ್ಲಿ ಬಹುಶಃ ಕಪ್ಪು ಎಂಬುದು ಸೌಂದರ್ಯವಿಹೀನವಾದುದು ಎಂದೇ ಬಗೆಯಲಾಗಿತ್ತು. ಅದೇನೇ ಇದ್ದರೂ ಶೇಕ್ಸ್‌ಪಿಯರ್ ತನ್ನ ಕಾವ್ಯದಲ್ಲಿ ಕಪ್ಪು ವರ್ಣವನ್ನು ಗೌರವದಿಂದ ಪರಿಗಣಿಸಿದ್ದು ಮಾತ್ರವಲ್ಲದೆ, ಅದಕ್ಕಿಂತಲೂ ಮಿಗಿಲಾಗಿ ಅದರಲ್ಲಿ ನೈಸರ್ಗಿಕ ಸೌಂದರ್ಯವನ್ನೇ ಕಾಣಲೆತ್ನಿಸುತ್ತಾನೆ. ಬಹುಶಃ ಕಪ್ಪು ಮಹಿಳೆಯೊಬ್ಬಳು ಕವಿಯ ವೈಯಕ್ತಿಕ ಜೀವನವನ್ನೇ ಪ್ರವೇಶಿಸಿದ್ದು ಅದಕ್ಕೆ ಕಾರಣವಿದ್ದೀತು. ಆದರೆ ಅವರೆಗೂ ಕಡೆಗಣಿತವಾಗಿದ್ದು ಪ್ರಸ್ತುತ ಮಹಾಕವಿಯೊಬ್ಬನ ಕಾವ್ಯದರ್ಶನದಲ್ಲೇ ಸೇರಿಹೋದ ಈ ಕಪ್ಪು ವರ್ಣ, ಪಾಶ್ಚಾತ್ಯ ಸಾಹಿತ್ಯ ಜಗತ್ತಿನಲ್ಲಿ ತನ್ನ ಸಹಜ ಸೌಂದರ್ಯದ ಬಗೆಗೆ ಜಿಜ್ಞಾಸೆ ಉಂಟಾಗಲು ಶೇಕ್ಸ್‌ಪಿಯರ್‌ನ ಈ ಸಾನೆಟ್‌ಗಳು ಕಾರಣವಾದವು ಎಂಬ ಕಟು ಸತ್ಯವನ್ನು ಮರೆಯುವಂತಿಲ್ಲ.

ಇದಾದ ನಂತರ ಕವಿ ಸಾನೆಟ್ 128ರಲ್ಲಿ ಆ ಕಪ್ಪು ಮಹಿಳೆ ಕೇವಲ ಒಬ್ಬ ಅಸಾಮಾನ್ಯ ಅಭ್ಯರ್ಥಿ ಮಾತ್ರವಾಗಿರದೆ, ತನ್ನ ಸಂಗೀತ ಪ್ರಾವೀಣ್ಯತೆಯಿಂದಲೂ, ಅದರ ಮಾಧುರ್ಯದಿಂದಲೂ ತನ್ನಂಥ ಇನ್ನೊಬ್ಬ ಕಲಾವಿದನನ್ನು ಅಥವಾ ಶೇಕ್ಸ್‌ ಪಿಯರ್‌ನಂಥ ಒಬ್ಬ ಮಹಾ ಕವಿಚೇತನವನ್ನೇ ಕಾಡಿ ಕಂಗೆಡಿಸುವಷ್ಟು ಪರಿಣಾಮ ಕಾರಿಯಾದ ವ್ಯಕ್ತಿತ್ವವನ್ನು ಕವಿ ಶೇಕ್ಸ್‌ಪಿಯರ್ ಅವಳಲ್ಲಿ ಕಾಣುತ್ತಾನೆ.

---

1. Shakespeare. The Sonnets. P. 216 (ed) N. K. Dasgupta

"Do I envy those jacks that nimble leap
To Kiss the tender inward of thy hand"[1]

ಈ ಇಡೀ ಸಾನೆಟ್‌ನ ಭಾವಾರ್ಥವನ್ನು ಡಾ. ಎನ್. ಕೆ. ದಾಸಗುಪ್ತರವರು ಹೀಗೆ ವಿವರಿಸುತ್ತಾರೆ : "The Dark Lady is an accomplished musician. When she plays upon the virginal, a fashionable instrument, the keys of the instrument kiss her fingers. The jacks (Keys) are lucky, and the poet envies them. He wishes that the lady would permit him to kiss her lips just as she permits the jacks to kiss her fingers"[2] ಇಲ್ಲಿ ಗಮನಾರ್ಹವಾದ ಎರಡು ಅಂಶಗಳೆಂದರೆ, ಮೊದಲನೆಯದಾಗಿ ಶೇಕ್ಸ್‌ಪಿಯರ್‌ನ ಈ ಕಪ್ಪು ಮಹಿಳೆ ಅತ್ಯಂತ ಸಂಕೀರ್ಣ ವ್ಯಕ್ತಿತ್ವವುಳ್ಳವಳೆಂಬುದನ್ನು ಅವಳನ್ನು ಕುರಿತ ನಾಲ್ಕು ಸಾನೆಟ್ ಗಳಿಂದಲೂ ಕಾಣಬಹುದಾಗಿದೆ. ಎರಡನೆಯದೂ ಮತ್ತು ಅಷ್ಟೇ ಮಹತ್ವದ್ದು ಆದ ಅಂಶವೆಂದರೆ, ವರ್ಜಿನಲ್ ಎಂಬ ಸಂಗೀತವಾದ್ಯದ ಗುಂಡಿಗಳನ್ನು ಒತ್ತುವ ಮೂಲಕ ಅವಳು ತನ್ನ ವಾದ್ಯ ಸಂಗೀತವನ್ನು ನುಡಿಸುತ್ತಾಳೆ. ಅದರರ್ಥ, ತನ್ನ ಬೆರಳುಗಳನ್ನು ಚುಂಬಿಸಲು ಅವಳು ಆ ವಾದ್ಯದ ಗುಂಡಿಗಳಿಗೆ ಅನುಮತಿ ನೀಡಿದಂತೆ ಅವಳ ತುಟಿಗಳನ್ನು ಚುಂಬಿಸಲು ನನಗೂ ಅನುಮತಿ ನೀಡಲಾರಳೆ ಎಂಬ ಆಕಾಂಕ್ಷೆಯು ಕವಿ. ಬಹುಶಃ ಆ ಗುಂಡಿಗಳು ನನಗಿಂತಲೂ ಭಾಗ್ಯ ಶಾಲಿಗಳು ಎಂದು ವರ್ಣಿಸುವುದನ್ನು ವಿಶೇಷವಾಗಿ ಲಕ್ಷಿಸಬೇಕು. ಏಕೆಂದರೆ, ಅವಳನ್ನು ಕೇವಲ ಒಂದು ಗುಲಾಮಗಿರಿಯ ಹೆಣ್ಣು ಎಂದು ತೆಗೆದುಕೊಂಡ ಪಕ್ಷದಲ್ಲಿ ಅವಳನ್ನು ಚುಂಬಿಸಲು ಶೇಕ್ಸ್‌ಪಿಯರ್‌ನಂಥ ಒಬ್ಬ ಬಿಳಿಯ ಅಥವಾ ಕುಲೀನ ವ್ಯಕ್ತಿ, ಆ ಸಲುವಾಗಿ ಅವಳ ಅನುಮತಿಗಾಗಿ ಕಾಯಬೇಕಾದುದಿಲ್ಲ. ಆದರೆ ನಿಜವಾಗಿ ಅವಳ ಅನುಮತಿಗಾಗಿ ಕಾತರದಿಂದಲೇ ಕಾಯುತ್ತಾನೆ. ಏಕೆಂದರೆ, ಅವಳಿಗೆ ಅವಳದೇ ಆದ ಒಂದು ವ್ಯಕ್ತಿತ್ವವಿದೆ ; ಹಾಗೆಯೇ ಸಮಾನ ಗೌರವಕ್ಕೂ ಅವಳು ಪಾತ್ರಳಾಗಿದ್ದಾಳೆ. ಜೊತೆಗೆ ಇವಳು ತನ್ನ ಯೌವನವನ್ನೆಲ್ಲ ಸೂರೆಗೈದವಳು ಎಂಬುದಾಗಿ ಕವಿ ಶೇಕ್ಸ್‌ಪಿಯರ್ ಒಂದೆಡೆ ತನ್ನ 133ನೆಯ ಸಾನೆಟ್‌ನಲ್ಲಿ ಆ ಕಪ್ಪು ಮಹಿಳೆಯನ್ನು ಶಪಿಸುತ್ತಾನೆ. ಅಂದರೆ, ಶೇಕ್ಸ್‌ಪಿಯರ್‌ನಂಥ ಒಬ್ಬ ಮಹಾನ್ ಪ್ರತಿಭಾವಂತನನ್ನು ಆಕರ್ಷಿಸಿದ ಅವಳ ವ್ಯಕ್ತಿತ್ವ ಅದೆಷ್ಟು ಜ್ವಲಂತವಾದುದಿರಬೇಕು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಅದೇ ಸಂದರ್ಭದಲ್ಲಿ ಅತ್ಯಂತ ಸುಂದರಿಯಾದ ಹೆಣ್ಣನ್ನು ಜಾತಿಯ ಕಾರಣದಿಂದಾಗಿ ಅವಳನ್ನು ಚಂಡಾಲ ಕನ್ಯೆ ಎಂಬುದಾಗಿ ತಿರಸ್ಕರಿಸಿದ ನಾಗವರ್ಮನು ಪ್ರತಿನಿಧಿಸುವ ಸಾಂಸ್ಕೃತಿಕ ಮೌಲ್ಯಗಳ ಹಿನ್ನೆಲೆಯಲ್ಲಿ, ಇದೇ ಶೇಕ್ಸ್‌ಪಿಯರ್‌ನ ಕಪ್ಪು ಹೆಣ್ಣಿನ ಅನುಪಮ ವ್ಯಕ್ತಿತ್ವದ ಸ್ವರೂಪವನ್ನು

1. Ibid P. 216
2. Ibid 217

ಅರ್ಥಮಾಡಿಕೊಳ್ಳುವುದರಿಂದ, ಅಸ್ಪೃಶ್ಯತೆ ಮತ್ತು ಜಾತಿಯಂಥ ಮುಷ್ಟಿ ಗ್ರಾಹ್ಯ ವಲ್ಲದ ಮಾನಸಿಕ ಅಸ್ತ್ರಗಳಿಂದ, ಮಾನವ ಜನಾಂಗದ ಒಂದು ವರ್ಗವನ್ನು ನಿರಾಯಾಸವಾಗಿ ನಿಗ್ರಹಿಸುವ, ಭಾರತೀಯ ಅದರಲ್ಲೂ, ನಿರ್ದಿಷ್ಟವಾಗಿ ವೈದಿಕ ಸಂಸ್ಕೃತಿಯ ನೈಚ್ಯತೆಯೂ ಅದರ ವಿಚಾರ ವಿಹೀನತೆಯೂ ಸುಲಭವಾಗಿಯೇ ಮನನವಾಗದಿರದು. ಈ ದೃಷ್ಟಿಯಲ್ಲಿ ನೋಡಿದಾಗ ಇ. ಪಿ. ರೈಸ್‌ರವರು ಹೇಳುವ "...it must be confessed that Kanarese writers have contributed little to the stock of the world's knowledge"[1] ಎಂಬ ಅಭಿಪ್ರಾಯ ಕಠೋರ ವಾಸ್ತವ ಸತ್ಯವೆನಿಸುತ್ತದೆ. ಅಲ್ಲದೆ ರೈಸ್‌ರವರ ಈ ಅಭಿಪ್ರಾಯ ಅನ್ಯ ದೃಷ್ಟಿಯಲ್ಲಿ ಏನೇ ಆಗಿದ್ದರೂ, ಶೇಕ್ಸ್‌ಪಿಯರ್‌ನಂಥ ಕವಿಗಳ ದೃಷ್ಟಿಯಲ್ಲಿ ನೋಡಿದಾಗ ಕನ್ನಡ ಸಾಹಿತ್ಯ ಜಾತ್ಯತೀತ ಸಿದ್ಧಾಂತದಿಂದ ಹೊರತಾದುದು ಮಾತ್ರ ವಲ್ಲದೆ, ನಿರ್ದಿಷ್ಟವಾಗಿ ನಾಗವರ್ಮ ಮತ್ತು ಕುಮಾರವ್ಯಾಸನಂಥ ವೈದಿಕ ಕವಿಗಳನ್ನು ನೋಡಿದಾಗ ಅದಕ್ಕೊಂದು ವಿಶ್ವ ಸ್ವರೂಪ (Universal character) ವಿಲ್ಲವೆಂಬುದು ಕೂಡ ಸುಲಭವಾಗಿಯೇ ವೇದ್ಯವಾಗುತ್ತದೆ.

3

ಈ ಭಾಗದಲ್ಲಿ ನೀಗ್ರೊ ಕಾವ್ಯವನ್ನು ವಿವೇಚನೆಗೆ ಎತ್ತಿಕೊಳ್ಳುವ ಮೊದಲು ಕೆಲವು ಸ್ಪಷ್ಟೀಕರಣಗಳು : ಅಮೆರಿಕಾ ಮತ್ತು ಆಫ್ರಿಕಾಗಳಲ್ಲಿ ಸುಪ್ರಸಿದ್ಧರಾಗಿರುವ ಲೇಖಕರನ್ನು ಇಲ್ಲಿ ಸುಮ್ಮನೇ ಪ್ರಸ್ತಾಪಿಸಿ ಉಳಿದಂತೆ, ಶಕ್ತಿಯುತವಾದ ಕಾವ್ಯರಚನೆ ಮಾಡಿಯೂ ಅಜ್ಞಾತರಾಗಿ ಉಳಿದಿರುವ ದಕ್ಷಿಣ ಆಫ್ರಿಕಾದ ಕೆಲವು ಗುಡ್ಡಗಾಡು ಪ್ರದೇಶಗಳಲ್ಲಿ ಬದುಕಿರುವ ಕೆಲವು ಕವಿಗಳ ಕಾವ್ಯ ಭಾಗಗಳನ್ನು ಸದ್ಯದ ವಿವೇಚನೆಗೆ ಎತ್ತಿಕೊಳ್ಳಲು ಉದ್ದೇಶಿಸಲಾಗಿದೆ. ಜೊತೆಗೆ ಅವರ ಕಾರ್ಯದ ಅನುಭವ ದ್ರವ್ಯದಲ್ಲಿನ ವೈವಿಧ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ದಲಿತ ಸಾಹಿತ್ಯದಂತೆಯೇ ಹಲವಾರು ವೃತ್ತಿಗಳ ಹಿನ್ನೆಲೆಯಿಂದ ಬಂದ ಕವಿಗಳನ್ನೂ ಇಲ್ಲಿ ಕಾಣಿಸಬಹುದಾಗಿದೆ. ಉದಾಹರಣೆಗೆ. ಫೆಡ್ರಿಕ್–ಎಸ್–ಅರ್ಖರ್ಸ್ಟ್ ಫಾನ್, ಸ್ಕಾಟ್‌ಲ್ಯಾಂಡ್‌ನ ಅಬೇರಡೀನ್ ವಿಶ್ವವಿದ್ಯಾನಿಲಯದ ಪದವೀಧರ : ಅವನು ಸೈನಿಕನಾಗಿ ಸೇವೆ ಸಲ್ಲಿಸಿದ್ದು ಆಸ್ಟ್ರೇಲಿಯನ್ ಸೇನಾ ಬಲದಲ್ಲಿ. ಸದ್ಯ ಅವನು ಆಫ್ರಿಕಾಕ್ಕಾಗಿರುವ ಸಂಯುಕ್ತ ಸಂಸ್ಥಾನದ ಆರ್ಥಿಕ ಉಚ್ಚಾಯುಯುಕ್ತ ; ಕವಿ ಮತ್ತು ಕಾದಂಬರಿಕಾರ. ಬಿರಗೊ ಡಿಯಾಪ್ ಸೆನ್‌ಗಲ್ ಹುಟ್ಟಿದ್ದು ಡಕಾರದಲ್ಲಿ, ಶಿಕ್ಷಣ ಪಡೆದದ್ದು ಫ್ರಾನ್ಸ್ ನಲ್ಲಿ. ವೃತ್ತಿ ಪಶುವೈದ್ಯದ ವಿಜ್ಞಾನದಲ್ಲಿ ಪರಿಣತ, ಕವಿ ಮತ್ತು ಕಥೆಗಾರ. ಈ ಲೇಖನ ಕೃತಿ "Tales of Amadou-Koumba" ಅತ್ಯಂತ ಪ್ರಸಿದ್ಧಿ ಪಡೆದ

1. E. P. Rice. A History of Kanarese Literature P. 108 1920 (Second edition)

ಕಥಾಸಂಕಲನ. ದಕ್ಷಿಣ ಆಫ್ರಿಕಾದ ಪೀಟರ್ ಕುಮಾಲೊ ಎಂಬ ಲೇಖಕನ ಹಿನ್ನೆಲೆ ಇವರೆಲ್ಲರಿಗಿಂತಲೂ ಭಿನ್ನವಾದುದು. ಅವನೊಬ್ಬ ಕಲಾವಿದ ಮತ್ತು ಲೇಖಕ. ಇವನ ಕಥೆಗಳಿಗೆ ಸಂದ ಪ್ರಶಸ್ತಿ, ಪುರಸ್ಕಾರಗಳು ಹಲವಾರು. ಇಂದಿಗೂ ತೀವ್ರ ಬಡತನದಲ್ಲೇ ಅವನ ಬದುಕು. ಕೇಪ್ ಪ್ರಾಂತದ ಸೈಮನ್ಸ್ ಟೌನ್‌ಸಲ್ಲಿನ ಒಂದು ಹಡಗು ಕಟ್ಟೆಯಲ್ಲಿ ಇವನು ಕೂಲಿ ಕಾರ್ಮಿಕ.

ಟಾಮ್‌ಬೋಯಾ ಕೀನ್ಯಾ—ಇನ್ನೊಬ್ಬ ವಿಶಿಷ್ಟಾನುಭವದ ಲೇಖಕ ; ಕೀನ್ಯಾದ ಸ್ವಾತಂತ್ರ್ಯ ಆಂದೋಲನದ ಮುಂಚೂಣಿ ನಾಯಕರಲ್ಲೊಬ್ಬ. ಈತ ಕೀನ್ಯಾದ ಕಾರ್ಮಿಕ ಮಹಾ ಸಂಘದ ಪ್ರಧಾನ ಕಾರ್ಯದರ್ಶಿ. ಅಷ್ಟೇ ಅಲ್ಲದೆ, ಕೀನ್ಯಾದ ಶಾಸನ ಸಭಾ ಸದಸ್ಯತ್ವವನ್ನು ಸಾಧಿಸಿದ ಪ್ರಪ್ರಥಮ ಆಫ್ರಿಕನ್ ನೀಗ್ರೊ.

ಅದಲೈಡೇ ಕ್ಯಾಸ್ಲೀ ಹೇವರ್ಡ್‌ಸೀರಾ ಲಿಯೊನ್—ಎಂಬ ಈ ಮಹಿಳೆ ಇಡೀ ತನ್ನ ಜೀವನವನ್ನೇ ಒಂದು ಸಾಮಾಜಿಕ ಆಂದೋಲನವನ್ನಾಗಿ ಪರಿವರ್ತಿಸಿದುದೇ ಅಲ್ಲದೆ, ತೊಂಬತ್ತು ವರ್ಷಗಳ ಸುದೀರ್ಘ ಕಾಲ ಬದುಕಿದ ಧೀಮಂತ ಮಹಿಳೆ. ಇಂಗ್ಲೆಂಡ್ ಮತ್ತು ಜರ್ಮನಿಗಳಲ್ಲಿ ಉಚ್ಚ ಶಿಕ್ಷಣ ಪಡೆದ ಈಕೆ ತನ್ನ ಸೋದರಿಯ ಸಹಕಾರದೊಡನೆ ಫ್ರೀಟಾನ್ ಪಟ್ಟಣದಲ್ಲಿ 1897ರಲ್ಲಿ ಒಂದು ಶಾಲೆ ತೆರೆದಳು. ಇವಳ ಉದಾತ್ತ ವ್ಯಕ್ತಿತ್ವಕ್ಕೆ ಮಾರುಹೋದ ಆ ಕಾಲದಲ್ಲಿ ಆಫ್ರಿಕಾದಾದ್ಯಂತ ಪ್ರಸಿದ್ಧ ಲಾಯರ್ ಎನಿಸಿದ್ದ ಗೋಲ್ಡ್‌ಕೋಸ್ಟ್ ಎಂಬ ಬಿಳಿಯ ವ್ಯಕ್ತಿ ಅವಳನ್ನು ಮದುವೆ ಮಾಡಿಕೊಂಡ. ಕವಯತ್ರಿ ಮತ್ತು ಕಥೆಗಾರ್ತಿ. ತನ್ನ ತೊಂಬತ್ತೊಂದನೆ ವಯಸ್ಸಿನಲ್ಲಿ ಸಾಯುವ ಕೆಲವು ದಿನಗಳ ಮೊದಲು ತನ್ನ ಆತ್ಮಕಥೆಯನ್ನು ಪ್ರಕಟಿಸಿದಳು.[1]

ಹೀಗೆ ದಕ್ಷಿಣ ಆಫ್ರಿಕಾ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಬರೆಯುತ್ತಿರುವ ಬಹುತೇಕ ಎಲ್ಲ ನೀಗ್ರೊ ಲೇಖಕರೂ ವೈವಿಧ್ಯಮಯವಾದ ಜೀವನಾನುಭವದ ಹಿನ್ನೆಲೆಯನ್ನು ಹೊಂದಿದವರಾಗಿದ್ದಾರೆ. ಅವರ ಅನುಭವದ ವೈವಿಧ್ಯತೆಯಿಂದಾಗಿ ಅವರ ಸೃಷ್ಟ್ಯಾತ್ಮಕ ಸಾಹಿತ್ಯವೂ ಅದೇ ವೈವಿಧ್ಯತೆಯನ್ನು ಪಡೆದಿರುವುದಷ್ಟೇ ಅಲ್ಲದೆ, ಸಾಹಿತ್ಯ ಸೌಂದರ್ಯದ ಒಟ್ಟಂದದಲ್ಲಿ ಇಡೀ ಪಾಶ್ಚಾತ್ಯ ಸಾಹಿತ್ಯವೇ ಒಂದು ಅಪೂರ್ವ ಜೀವನಾನುಭವವನ್ನು ಪಡೆದುಕೊಂಡಂತಾಗಿದೆ.

ಇನ್ನು ಈ ಹಿಂದೆಯೇ ಸೂಚಿಸಿರುವಂತೆ ಇಲ್ಲಿ ಪ್ರಸ್ತಾಪಿಸಬೇಕಾಗಿರುವ ಹಿರಿಯ ತಲೆಮಾರಿನ ಕೆಲವು ನೀಗ್ರೊ ಲೇಖಕರೆಂದರೆ, ಲಾಂಗ್‌ಸ್ಟನ್ ಹಗ್ಸ್, ಓಲೆ ಸೋಯಿಂಕ, ಚಿನುವ ಅಚಿಬೆ ರಾಬರ್ಟ್ ಹಿಲ್, ಅಲ್ಬರ್ಟ್ ಮುರ್ರೆ ಸೌಂದರ್ಸ್ ರೆಡ್ಡಿಂಗ್[2], ಅರ್ನಾ

1. An African Treasury (Ed.) Longston Hngues, P. 205–7
2. Anger and Beyond (Ed.) Robert Hill

ಬೊಂಟೆಂಪ್ಸ್, ರಾಬರ್ಟ್ ಬೋನ್ ಹೊರೇಸ್–ಆರ್–ಕೇಟನ್, ಹಾರ್ವೆ ಸ್ವಾಡೊಸ್, ರಿಚರ್ಡ್ ರೈಟ್, ಜೇಮ್ಸ್ ವೆಲ್ಡನ್ ಜಾನ್ಸನ್, ಜೋಮ್ ಬಾಲ್ಡ್ವಿನ್, ವಿಲಿಯಂಮ್ ಡೆಂಬಿ ಮತ್ತು ಲಿರಾಯ್ ಜೋನ್ಸ್ ಇನ್ನೂ ಮುಂತಾದವರು.[1]

ಈ ಹಿಂದೆಯೇ ಒಂದು ಮಾತಿನಲ್ಲಿ ಸೂಚಿಸಿರುವಂತೆ ಮೇಲೆ ತಿಳಿಸಿರುವ ಲೇಖಕರು ಇಡೀ ನೀಗ್ರೊ ಸಾಹಿತ್ಯದಲ್ಲಿ ತಮ್ಮಷ್ಟಕ್ಕೆ ತಾವೇ ಮಹತ್ವದ ಸಾಹಿತಿಗಳು ಎನಿಸಿದ್ದಾರೆ. ಅಲ್ಲದೆ ಸದ್ಯ ಅವರ ಕೃತಿಗಳನ್ನು ಪ್ರಸ್ತಾಪ ಮಾಡಹೋಗುವುದಿಲ್ಲ. ಬದಲಾಗಿ ಯುವತಲೆಮಾರಿನ ಕೆಲವು ಕವಿಗಳ ಕಾವ್ಯ ಭಾಗಗಳನ್ನು ಪ್ರಸ್ತಾಪಿಸಲು ಇಲ್ಲಿ ಉದ್ದೇಶಿಸಿದೆ. ಅದೂ ಅಲ್ಲದೆ ಇಲ್ಲಿ ಕೈಗೊಂಡಿರುವುದು ಕೇವಲ ಒಂದು ಸ್ಥೂಲ ವಿವೇಚನೆ ಎಂಬುದನ್ನು ನೆನೆಯಬಹುದಾಗಿದೆ.

ಹಾಗೆಯೇ ಇನ್ನೊಂದು ಮಾತೆಂದರೆ, ಇಲ್ಲಿ ಪ್ರಸ್ತಾಪಿಸಲಾಗುವ ಕವಿತೆಗಳು ನೀಗ್ರೊ ಕಾವ್ಯದ ಪ್ರಾತಿನಿಧಿಕ ಕವಿತೆಗಳೆಂದೇನೂ ಬಗೆಯಲು ಕಾರಣವಿಲ್ಲ. ಜೊತೆಗೆ, ಸ್ವಾತಂತ್ರ್ಯ ಮತ್ತು ಸಮಾನತೆಯ ವಿಚಾರಗಳು, ಮತ್ತು ಸಿಟ್ಟು ಅಥವಾ ಆಕ್ರೋಶವೇ ಮೊದಲಾದ ಪ್ರತಿಭಟನಾತ್ಮಕ ಧೋರಣೆಗಳು, ವರ್ಗ ವ್ಯತ್ಯಾಸಗಳು, ತಾವು ವಾಸಿಸುವ ಕಾಡುಮೇಡುಗಳೇ ಮೊದಲಾದಲ್ಲಿನ ಪ್ರಕೃತಿಯ ಸೊಗಸು, ಜನಪದ ನಂಬಿಕೆ, ಕಲೆ, ಪ್ರೇಮ ಮತ್ತು ಅನುರಾಗವೇ ಮುಂತಾದ ಭಾವಗಳು ಹೇಗೆ ಇಲ್ಲಿ ಕಾವ್ಯವಾಗಿವೆ ಎಂಬುದನ್ನೂ, ಅವುಗಳಲ್ಲಿ ವ್ಯಕ್ತವಾಗಿರಬಹುದಾದ ಸಿಟ್ಟು ಮತ್ತು ಆಕ್ರೋಶಗಳ ಆಚೆಗೂ ಎಂಥ ಜೀವನ ಸೌಂದರ್ಯವನ್ನೂ ಸತ್ಯ ಸಂಗತಿಗಳನ್ನೂ ಅವು ಬಿಟ್ಟು ಕೊಡುತ್ತವೆ ಎಂಬುದನ್ನು ಈ ಮುಂದಿನ ಕೆಲವು ಕಾವ್ಯ ಭಾಗಗಳಲ್ಲಿ ನೋಡಲೆತ್ನಿಸ ಬಹುದಾಗಿದೆ.

ಮೊದಲಿಗೆ ಸಿಟಾಪೇ ಎಂಬ ಒಬ್ಬ ಕವಿ ಆಫ್ರಿಕಾದ ಅಲ್ಪಸಂಖ್ಯಾತ ಬಿಳಿಯ ಸಮಾಜದ ನಡುವೆ ತಮ್ಮ ಮಾನವೀಯ ಮೌಲ್ಯಗಳು ತಮ್ಮದೇ ಆದ ದೈನಂದಿನ ಬದುಕಿನಲ್ಲಿ ತಮ್ಮೆದುರಿಗೇ ಅವು ನಿತ್ಯವೂ ಕಳೆದುಹೋಗುತ್ತಿರುವ ತಮ್ಮ ಹಕ್ಕುಗಳ ಸ್ಥಿತಿಯನ್ನು ವರ್ಣಿಸುತ್ತ, ಐತಿಸ್ಮಥ್ಯ, ಗುಲಾಮಗಿರಿಯಂಥ ಗಾಢಾಂಧಕಾರದ ನಡುವೆ ಸಿಲುಕಿದ ಕಪ್ಪು ಆತ್ಮಗಳು ಜಾಗೃತಗೊಳ್ಳುತ್ತಿರುವ ಸ್ಥಿತಿಯನ್ನು 'Weapon' ಎಂಬ ತನ್ನ ಪುಟ್ಟ ಕವಿತೆಯಲ್ಲಿ ಹೀಗೆ ಚಿತ್ರಿಸುತ್ತಾನೆ :

"Your cattles are gone
My countrymen
Go rescue them, Go rescue them
Leave the breechloader alone

1. Native Sons (Ed.) Edward Morgolies

And turn to the pen.
Take paper and ink
For that is your shield.

"Your rights are going
so pick up your pen,
Load it, load it with ink.
Sit in your chair–
Repair not to Hoho,
But fire with your pen[1]"

ಈ ಪದ್ಯದ ಮೊದಲ ಏಳು ಸಾಲುಗಳಲ್ಲಿ ನೀಗ್ರೊ, ಜನ ಕಾಡುಮೇಡುಗಳ ಅಂಚುಗಳಲ್ಲಿ ತಮ್ಮ ದನಕರುಗಳನ್ನು ಮೇಯಿಸುತ್ತಾ, ಅವುಗಳು ಕ್ರೂರ ಪ್ರಾಣಿಗಳ ಬಾಯಿಗೆ ಸಿಲುಕದಂತೆ ಅವುಗಳನ್ನು ಕಾಯ್ದುಕೊಳ್ಳಬೇಕಾದ ಚಿತ್ರವನ್ನು ಕೊಡುತ್ತಾನೆ. ಅಲ್ಲದೆ ಹಾಗೆ ಆ ಜಾನುವಾರುಗಳನ್ನು ಕ್ರೂರಮೃಗಗಳಿಂದ ಕಾಯ್ದುಕೊಳ್ಳಬೇಕೆಂಬ ಅಥವಾ ರಕ್ಷಿಸಬೇಕೆಂಬ ಈ ಚಿತ್ರ ಅಲ್ಲಿಂದ ಮತ್ತೆ ಬೆಳೆದು ಮುಂದಿನ ಪದ್ಯ ಭಾಗಕ್ಕೆ ಬರುತಿದ್ದಂತೆಯೇ, ಕಪ್ಪು ಜನ ತಮ್ಮ ಮಾನವ ಹಕ್ಕುಗಳನ್ನು ರಕ್ಷಿಸಿಕೊಳ್ಳಬೇಕಾದ ಅನಿವಾರ್ಯತೆಯ ಅರ್ಥದ ತಿರುವು ಪಡೆದುಕೊಳ್ಳುತ್ತಿರುವ ಕಾವ್ಯದ ಸೊಗಸನ್ನು ಲಕ್ಷಿಸಬೇಕು ಅಲ್ಲದೆ, ತಮಗೆ ಪರಿಚಯದ ವೃತ್ತಿಯಾದ ದನ ಮೇಯಿಸುವ ಒಂದು ಸಾಮಾನ್ಯ ಚಿತ್ರವನ್ನು ಬಿಡಿಸುವ ಮೂಲಕ. ಪೆನ್ನು, ಇಂಕು. ಅಂದರೆ. ತಾವು ಕಳೆದುಕೊಂಡಿರುವ ಅಕ್ಷರ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯ ಹಾಗೂ ತಮ್ಮ ಹಕ್ಕುಗಳ ಪ್ರತಿಪಾದನೆಯೇ ಮೊದಲಾದ ವಿಚಾರಗಳು. ತಮ್ಮ ಜಾನುವಾರುಗಳನ್ನು ತಾವೇ ಕಾಪಾಡಿಕೊಳ್ಳಬೇಕೆಂಬ ನೆವದಲ್ಲಿ ಸರಳವೆನಿಸಿದರೂ ಧ್ವನಿಪೂರ್ಣವಾಗಿಯೇ ವ್ಯಕ್ತವಾಗುತ್ತಿರುವುದನ್ನು ಇಲ್ಲಿ ಗಮನಿಸಬೇಕು.

ಎಲ್ಲ ಕಾಲಕ್ಕೂ ಎಲ್ಲ ಸಮಾಜಗಳಲ್ಲೂ ಜನಜನಿತವಾದ ಸಿರಿತನ ಮತ್ತು ಬಡತನದಂಥ ವ್ಯತ್ಯಾಸವನ್ನೂ, ಆ ವ್ಯತ್ಯಾಸದ ನಡುವೆ ಮನುಷ್ಯ ಹೇಗೆ ತನಗರಿವಿಲ್ಲದೆಯೇ ತನ್ನ ಮನುಷ್ಯತ್ವವನ್ನು ತಾನೇ ಕಳೆದುಕೊಳ್ಳುತ್ತಾನೆ ಎಂಬುದನ್ನೂ ದಕ್ಷಿಣ ಆಫ್ರಿಕಾದ ಇನ್ನೊಬ್ಬ ಅಜ್ಞಾತ ಕವಿಯ 'Song of the poor Man' ಎಂಬ ಕವಿತೆಯಲ್ಲಿ ಕಾಣಬಹುದಾಗಿದೆ.

ಐಷಾರಾಮದ ಕುರ್ಚಿಯನ್ನು ಹಿಡಿದು ಕುಳಿತ ಶ್ರೀಮಂತ ವರ್ಗ ಬಡತನದ ಬಗೆಗೆ ಅಮೋಘವಾಗಿ ಭಾಷಣ ಮಾಡುತ್ತಿರುವ ಒಂದು ಚಿತ್ರವನ್ನು ಬಿಡಿಸುವ ಈ

---

1. An African Treasary, P. 203
(Ed.) Longston Hughes

ಇದರ ಸಂಸ್ಕೃತ ರೂಪ ಕಾಲೋಗ್ರಗಣ : ಇದು ಯಾಪನೀಯ ಶಾಖೆಗೆ ಸೇರಿದ್ದ ಒಂದು ಪ್ರಬಲ ಗಣವಾಗಿತ್ತು' [ಹಂಪ. ನಾಗರಾಜಯ್ಯ : 'ಹರಿತಿಸಿರಿ' (ಸಂ) ಲಕ್ಷ್ಮಣ ತೆಲಗಾವಿ, (1987) ಪುಟ. 349] ಅತ್ತಿಮಬ್ಬೆಯು ಯಾಪನೀಯ ಗುರುಗಳ ಶಿಷ್ಯಳಾಗಿದ್ದಳು. ಆಕೆಗೆ ಬಾಲ್ಯದಲ್ಲಿ ಜಿನಚಂದ್ರಾಚಾರ್ಯರು ಗುರು ಗಳಾಗಿದ್ದರು, ಇವರ ವಿಚಾರವಾಗಿ ಪೊನ್ನನ ಶಾಂತಿಪುರಾಣದಲ್ಲಿ 20 ಪದ್ಯಗಳಲ್ಲಿ ಸ್ತುತಿಮಾಲಿಕೆಯಿದೆ [ಶಾಂತಿ ಪುರಾಣಂ, (ಸಂ). ಹಂಪ. ನಾಗರಾಜಯ್ಯ (1982), ಪ್ರಸ್ತಾವನೆ]. ಅತ್ತಿಮಬ್ಬೆಗೆ ಯೌವನದಲ್ಲಿ ಅಜಿತಸೇನಾಚಾರ್ಯರೂ, ಮುಪ್ಪಿನಲ್ಲಿ ಅರ್ಹನಂದಿ ಆಚಾರ್ಯರೂ ಅನುಗ್ರಹಿಸಿದ್ದರು. ಹೀಗೆ ಆಕೆಗೆ ಮೂವರು ಮಹಾನ್ ಜೈನಾಚಾರ್ಯತ್ರಯರ ಮಾರ್ಗದರ್ಶನ ದೊರೆಯಿತು.

ಅತ್ತಿಮಬ್ಬೆ ಶ್ರವಣ ಬೆಳ್ಗೊಳಕ್ಕೆ 981ರ ಸುಮಾರಿನಲ್ಲಿ ಗೊಮ್ಮಟ ದರ್ಶನ ನಿಮಿತ್ತವಾಗಿ ಹೋದಾಗ ಅಲ್ಲಿ, ಕಾಣೂರ್ಗಣ ತಿಲಕರಾದ ಮತ್ತು ಚಾವುಂಡರಾಯನ ಗುರುದ್ವಯರಲ್ಲಿ ಒಬ್ಬರಾದ ನೇಮಿಚಂದ್ರಾಚಾರ್ಯರ ಕೃಪೆಗೂ ಪಾತ್ರಳಾದಳು. ಫಲವಾಗಿ ಮುಂದೆ ಆಕೆಯ ಮಗ ಅಣ್ಣಿಗದೇವ ಪಡೆವಳ ತೈಲನಿಗೆ ನೇಮಿಚಂದ್ರಾ ಚಾರ್ಯರ ಶಿಷ್ಯನಾದ ಅಯ್ಯಣಯ್ಯನು ಗುರುವಾದನು (ರನ್ನ, ಅಜಿತಪುರಾಣ, 12-21), ಈ ರೀತಿಯಿಂದ ಕಾಣೂರ್ಗಣ ಪರಂಪರೆಯ ಗುರುಗಳು ಆಕೆಯ ಮನೆತನದ ಕುಲಗುರುಗಳಾಗಿದ್ದರು. ಅತ್ತಿಮಬ್ಬೆಯ ತಂದೆ-ಚಿಕ್ಕಪ್ಪಂದಿರಿಗೆ ಗುರುಗಳಾದ ಜಿನಚಂದ್ರರೂ ಕಾಣೂರ್ಗಣದವರು. ಪಶ್ಚಿಮ ಚಾಳುಕ್ಯರ ಆಳ್ವಿಕೆಯಲ್ಲಿ ಯಾಪನೀಯ ಸಂಘ ಕಾನೂರ್ಗಣ, ಸೂರಸ್ಥಗಣ, ತಿಂತ್ರಿಣಿಗಚ್ಛ, ಚಿತ್ರಕೂಟಾನ್ವಯ ಪ್ರಬಲ ವಾಗಿದ್ದುದಕ್ಕೆ ಅನೇಕ ಶಾಸನಗಳ ಆಧಾರವೂ ಕಂಡುಬರುತ್ತದೆ. [SII· XX· 18· A·D· 980 ; ಅದೇ-224. 1295 ; SII. IX-i, 288; SII. XV. 568 12 ಶ.: EI-XVI 9 A D 1053 ; SII XI-i 113 1074 ; SII. XVIII 71 A D 1066 ಇತ್ಯಾದಿ ಇನ್ನೂ ಹತ್ತಾರು ಶಾಸನಗಳಿವೆ].

22 ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯನ್ನು ಆರು ಕಡೆ 'ದಾನಚಿಂತಾಮಣಿ' ಎಂದು ಪರಿಚಯಿಸಿದೆ, ಒಂದೆರಡು ಕಡೆ 'ಅಭಿಲಷಿತಾರ್ಥ ದಾನವಿನೋದೆ' ಎಂದೂ ಕರೆಯಲಾಗಿದೆ. ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲೂ ಸಹ ಒಬ್ಬ ಮಹಿಳೆ ಪಡೆದ ಈ ಅದ್ಭುತ ಪ್ರಮಾಣದ ಪ್ರಾಧಾನ್ಯ ಶ್ಲಾಘನೀಯ. ದಾನಕ್ಕೆ ಜೈನಧರ್ಮದಲ್ಲಿ ವಿಶಿಷ್ಟ ಸ್ಥಾನವಿದೆ. ಗಂಡಸೇ ಸಂಸಾರದ ನೇತಾರ ನಾಗಿರುವುದರಿಂದ ದಾನಗಳನ್ನೂ ಪುರುಷನೇ ಪ್ರಧಾನ ಮಾಡಿದ್ದು ವಿಪುಲವಾಗಿ ಕಂಡುಬರುತ್ತದೆ. ಆದರೆ ಸಾವಿರಾರು ವರ್ಷಗಳ ಚರಿತ್ರೆಯಲ್ಲಿ, ಯಾವರಾಜ ರಾಣಿ ಪ್ರಧಾನಿ ಶ್ರೀಮಂತನೂ ದಾನ ಮಾಡಿರದಷ್ಟು ಬೃಹತ್ ಪ್ರಮಾಣದಲ್ಲಿ ದಾನವಿತ್ತವಳು ಅತ್ತಿಮಬ್ಬೆ, ಆದರಿಂದ ಬೇರೆ ಯಾರಿಗೂ ವ್ಯಾಪಕವಾಗಿ

ಸಲ್ಲದಿದ್ದ 'ದಾನಚಿಂತಾಮಣಿ' ಪ್ರಶಸ್ತಿ ಅತ್ತಿಮಬ್ಬೆಗೆ ಸಂದಿತು. ಆಕೆ 1500 ಜಿನಗೃಹಗಳನ್ನು ಕಟ್ಟಿಸಿದ್ದು ಊಹೆಗೂ ನಿಲುಕದ ಬೃಹತ್ ಸಾಧನೆ :

ಆ ಸತಿ ಮುಮ್ಮಾಡಿಸಿದಾ
ಸಾಸಿರದಯ್ನೂಱು ಬಸದಿಗಿದು ಕಳಶಮೆನ
ಲ್ಬಾಸುರಮಾಯ್ತು ಜಿನೇಂದ್ರಾ
ವಾಸಂ ತೊಳಗುವ ಸುವರ್ಣ್ಣ ಕಳಶೋನ್ನತಿಯಿಂ॥

ಇದಲ್ಲದೆ ಒಂದು ಸಾವಿರದ ಐನೂರು ಜಿನಬಿಂಬಗಳನ್ನೂ, ಮಂದಾಸನ, ಜಯಘಂಟೆ, ಶಾಂತಿಪುರಾಣದ ಸಾವಿರ ಓಲೆ ಪ್ರತಿ, ಅಜಿತಪುರಾಣದ ಪ್ರತಿ– ಎಲ್ಲವೂ ಆ ದಾನವಿನೋದೆಯ ದಾನ ಪರಂಪರೆಯನ್ನು ಸಾರುತ್ತವೆ. ರೊಕ್ಕಕ್ಕೆ ಲೆಕ್ಕವೇ ಇಲ್ಲದಂತೆ ಹಣದ ಹೊಳೆ ಹರಿಸಿದ್ದು ಧರ್ಮದ ಪ್ರಣಾಲಿಯಲ್ಲಿ ಎಂಬುದನ್ನು ವಿಶೇಷವಾಗಿ ಅನುಲಕ್ಷಿಸಬೇಕು. ಆಸನ್ನ ಭವ್ಯೆಯಾದ ಅತ್ತಿಮಬ್ಬೆಯ ಧರ್ಮ ಪ್ರಭಾವನೆಯು ಅನನ್ಯವೆನಿಸಿದ್ದು ಈ ಕಾರಣಕ್ಕಾಗಿ ಈ ಜಿನಧರ್ಮ ಪ್ರಭಾವನೆಯಿಂದ. ಆಕೆ ಆ ಕಾಲದ ಎಲ್ಲ ಉನ್ನತೋನ್ನತರಿಗಿಂತ ಎತ್ತರದಲ್ಲಿದ್ದಳೆಂದು ರನ್ನಕವಿ ಚಾರಿತ್ರಿಕ ಮಹತ್ವದ ಈ ವೃತ್ತಪದ್ಯವನ್ನು ಕೆತ್ತಿದ್ದಾನೆ :

ಪಿರಿಯಂ ಬೂತುಗನಾತನಿಂ ಮರುಳನಾತಂಗಂ ನೊಳಂಬಾಂತಕಂ
ಪಿರಿಯಂ ನೆಟ್ಟಗೆ ದಾನಧರ್ಮದೆಡೆಯೊಳ್ ಚಾವುಂಡರಾಯಂ ಕರಂ
ಪಿರಿಯಂ ಶಂಕರಗಂಡನಲ್ತೆ ಪಿರಿಯಂ ತದ್ಭಾರಮಂ ಪೊತ್ತು ನಿ
ತ್ತರಿಸುತ್ತಿರ್ಪುದಱಿಂದೆ ನೀನೆ ಪಿರಿಯೈ ಶ್ರೀ ದಾನ ಚಿಂತಾಮಣೀ ॥ (1-9)

23 ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯ ಬಂಧು ಬಾಂಧವ ಬಳಗವನ್ನು, ಕುಟುಂಬದ ಪ್ರಧಾನರನ್ನು ಒಂದು ವೃತ್ತ ಪದ್ಯದಲ್ಲಿ, ಛಾಯಾಚಿತ್ರ ತೆಗೆದಂತೆ, ಹಿಡಿದಿಡಲಾಗಿದೆ :

ಜಿನಪದ ಪಂಕಜ ಭ್ರಮರನೆಂಬ ನೆಗರ್ತ್ತೆಯನಾಳ್ದ ಮಲ್ಲಪ
ಯ್ಯನ ನೆಗೞ್ದಪ್ಪಕಬ್ಬೆಯ ಮಗಳ್ ಸಚಿವೋತ್ತಮನಪ್ಪ ಧಲ್ಲಪ
ಯ್ಯನ ಸೊಸೆ ನಾಗದೇವನ ಕುಳಾಂಗನೆ ತೈಲನತಾಯ್ ಜಸಕ್ಕೆ ಭಾ
ಜನ ಮೆನಿಪತ್ತಿಮಬ್ಬೆ ಜಿನಶಾಸನಮಂ ಬೆಳಗುತ್ತಮಿರ್ದ್ದಪಳ್ ॥

ಅತ್ತಿಮಬ್ಬೆಯ ಮಾವನಾದ, ವಾಜಿಕುಲಕ್ಕೆ ಸೇರಿದ, ಧಲ್ಲಪಯ್ಯನು ತೈಲಪ ಚಕ್ರಿಯ ಭುಜಾದಂಡನೆನಿಸಿದವನು. ಧಲ್ಲನಿಗೂ – ಆಹವಮಲ್ಲ (ತೈಲಪ) ನಿಗೂ ಸಿಂಹಾಸನವೊಂದು ಭೇದವೇ ಹೊರತು ಉಳಿದುದೆಲ್ಲ ಸಮಾನಸಂಬಂಧ ಸಖ್ಯ. ಈ ನೆಗಳ್ದ ಧಲ್ಲನನ್ನು ಶಾಸನದಲ್ಲಿ 'ಮಣ್ಣಾಳ ಸಿದ್ದಿ', 'ವಿವೇಕಬೃಹಸ್ಪತಿ'

ಎಂಬ ಎರಡು ವಿಶೇಷಣಗಳಿಂದ ನಿರ್ದೇಶಿಸಲಾಗಿದೆ ; ಇದು ಆಲೋಚನೀಯ ಕಿ. ಶ. 973ರಲ್ಲಿ ತೈಲಪನು ಸ್ವತಂತ್ರನಾಗುವ ಪೂರ್ವದಲ್ಲಿ ರಾಷ್ಟ್ರಕೂಟರ ಮಹಾಸಾಮಂತನಾಗಿದ್ದನು (B K No. 178.07 1933-34 ಕ್ರಿ. ಶ. 956 ಕಾರ್ಜೋಳ್) ರಾಷ್ಟ್ರಕೂಟ ದೊರೆ ಮುಮ್ಮಡಿಕೃಷ್ಣನು ತೈಲಪನನ್ನು ತರ್ದವಾಡಿಗೆ ಮಹಾಸಾಮಂತನನ್ನಾಗಿ ನೇಮಿಸಿದನು. ( SII. XI-i. 40. A-D. 965. ನರಸಲಗಿ). ಧಲ್ಲಪಯ್ಯನು ತೈಲಪನಿಗೆ ಸಾಮಂತನಾಗಿ ಯಶಸ್ವಿಯಾಗಲು ಯುದ್ಧಗಳಲ್ಲೂ ಜತೆನಿಂತು ಹೋರಾಡಿ ನೆರವಾಗಿದ್ದನು. ಆ ಕಾರಣದಿಂದ ತೈಲಪನು ಧಲ್ಲಪನಿಗೆ 'ಮಂಡಳಿಸಿದ್ಧಿ' ಎಂಬ ಪ್ರಶಸ್ತಿಯಿತ್ತಿದ್ದಾನೆ. ಅವರಂತೆ ತೈಲಪನಿಗೆ ಆಡಳಿತ ನಿರ್ವಹಣೆಯಲ್ಲಿ, ಸಭಾಸಂವಾಸನಾಗಿ, ಸೂಕ್ತ ಸಕಾಲಿಕ ವಿವೇಕಪೂರ್ಣ ಮಾರ್ಗದರ್ಶನ ಮಾಡಿದ್ದಕ್ಕಾಗಿ ಧಲ್ಲನಿಗೆ 'ವಿವೇಕ ಬೃಹಸ್ಪತಿ' ಬಿರುದಿತ್ತು ಸಂಮಾನಿಸಲಾಗಿದೆ.

24 ಲಕ್ಕುಂಡಿಯ ಶಾಸನದಲ್ಲಿ ಅತ್ತಿಮಬ್ಬೆಯ ಗಂಡನೂ, ಧಲ್ಲನ ಮಗನೂ ಆದ ನಾಗದೇವನ ಚಿತ್ರಣ ಸೇಂದ್ರಿಯಗ್ರಾಹ್ಯವಾಗಿದೆ. ಅಜಿತಪುರಾಣದಲ್ಲೂ ನಾಗದೇವನ ಸಾಹಸಮಯ ರೂಪ ಚಿತ್ರಣವಿದೆ; ಅಜಿತ ಪುರಾಣದಲ್ಲಿ ಸಿಗದಿರುವ ಎರಡು ವೃತ್ತ ಪದ್ಯಗಳು ಮತ್ತಿತರ ಉಪಷ್ಟಂಬಕ ಮಾಹಿತಿಗಳು ಶಾಸನದಲ್ಲಿವೆ. ವಾಜಿಕುಳತಿಳಕನೂ, ತೇಜೋಭಾಸ್ಕರನೂ, ವೀರತ್ರಿಣೇತ್ರನೂ, ನನ್ನಿ ಮಹಾರ್ಣವನೂ, ಕಂದುಕ ಪುರಂದರನೂ ಎನಿಸುವ ವಿರಾಗ್ರಣಿ ನಾಗದೇವನ ಪರಾಕ್ರಮದ ನಗಾರಿಯನ್ನು ನುಡಿಸಲಾಗಿದೆ [ಸಾಲು 11 ರಿಂದ 16]. ನಾಗದೇವ ಅತ್ತಿಮಬ್ಬೆ ದಂಪತಿಗಳ ಮಗನ ಚಿತ್ರಕೂಡ ಉಜ್ವಲವಾಗಿ ಕಣ್ಣಿಗೆ ಕಟ್ಟುತ್ತದೆ. ಕರ್ಣನ ನನ್ನಿ, ರಾಮನ ಬಾಣ, ಕಲ್ಲಿನಲ್ಲಿ ಕೆತ್ತಿದ ಅಕ್ಷರ – ಇವುಗಳಂತೆ ಅಣ್ಣಿಗದೇವನ 'ನನ್ನಿ' (ಸತ್ಯ) ಗುಣವೂ ನೃಪಶಾಸನವೆನಿಸಿತ್ತು (12-26). ಈ ನನ್ನಿಯಿಂದಾಗಿ ಅಣ್ಣಿಗದೇವನಿಗೆ 'ನನ್ನಿನಾರಾಯಣ' ಎಂಬ ಪ್ರಶಸ್ತಿಯಿತ್ತು. ಈ ನನ್ನಿಗುಣ ಸಹ, ಮಗ ಅಣ್ಣಿಗನಿಗೆ ಅಪ್ಪ ನಾಗದೇವನಿಂದ ಬಂದ ಬಳುವಳಿ: ಶಾಸನದಲ್ಲಿ ತಂದೆ ನಾಗದೇವನನ್ನು ಒಂದು ಕಡೆ 'ನನ್ನಿ ಮಹಾರ್ಣವ' (ಸಾಲು 14) ಎಂದು ಕರೆದಿದೆ.

ಮಲ್ಲಪನ ಕಡೆಯಿಂದ ಮೂರು ತಲೆಮಾರು (ಮಲ್ಲಪ-ಅತ್ತಿಮಬ್ಬೆ – ಅಣ್ಣಿಗದೇವ), ಧಲ್ಲಪನ ಕಡೆಯಿಂದಲೂ ಮೂರು ತಲೆಮಾರು (ಧಲ್ಲಪ-ನಾಗದೇವ-ಅಣ್ಣಿಗದೇವ) ಚಾಳುಕ್ಯ ಚಕ್ರವರ್ತಿ ತೈಲಪನ ಆಡಳಿತಾಂಗದಲ್ಲಿ ಉನ್ನತ ಅಧಿಕಾರದಲ್ಲಿ ಇದ್ದರು. ಈ ಪೀಳಿಗೆಯವರು ಪ್ರಾಣದ ಹಂಗು ತೊರೆದು ರಾಜ ನಿಷ್ಠೆಗೆ ಪಾತ್ರರಾಗಿದ್ದುದನ್ನು ಅಜಿತ ಪುರಾಣದಂತೆ ಲಕ್ಕುಂಡಿ ಶಾಸನವೂ, ಅತಿ ಸಂಕ್ಷೇಪದಲ್ಲಿಯೇ ಆದರೂ ಪರಿಣಾಮಕಾರಿಯಾಗಿ

ದಾಖಲಿಸಿದೆ. ಅತ್ತಿಮಬ್ಬೆಯು ಲಕ್ಕುಂಡಿಯಲ್ಲಿ ಕಟ್ಟಿಸಿದ 1501 ನೆಯ ಜಿನಾಲಯವೇ ಆಕೆಯ ಕಟ್ಟ ಕಡೆಯ ಬಸದಿ. ಈ ಲಕ್ಕುಂಡಿ ಶಾಸನವನ್ನು ಅಣ್ಣಿಗೆ ದೇವನೇ ಬರೆಸಿದ್ದಾನೆಂದು ಭಾವಿಸಬಹುದು.

25 ಅತ್ತಿಮಬ್ಬೆಯ ಕೀರ್ತಿಲತೆ ದಾಂಗುಡಿಯಿಟ್ಟು ಕನ್ನಡ ಶಾಸನ – ಕಾವ್ಯ ವಾಙ್ಮಯವನ್ನು ಬಾಚಿ ತಬ್ಬಿಕೊಂಡಿದೆ. ಆಕೆಯ ಯಶೋಗಾಥೆಯುಳ್ಳ ಹಲವು ಶತಮಾನಗಳ ಉದ್ದಕ್ಕೂ ಅನುರಣನವಾಗಿದೆ. ರನ್ನ ಕವಿಯ ಅಜಿತ ಪುರಾಣ, ಬ್ರಹ್ಮಶಿವನ ಸಮಯಪರೀಕ್ಷೆ ಕಾವ್ಯಗಳಲ್ಲಿ ನಿರೂಪಿತವಾದ ಆಕೆಯ ಜೀವನ ಚಿತ್ರ ಈ ಶತಮಾನದ ಉತ್ತರಾರ್ಧದಲ್ಲಿ 'ದಾನಚಿಂತಾಮಣಿ' ಕಾದಂಬರಿ ಯಲ್ಲಿ (1968) ಮರುಹುಟ್ಟು ಪಡೆದಿದೆ. ಈ ಸಾವಿರ ವರ್ಷದ ಅಂತರದಲ್ಲಿ ಸಾವು ಇರದ ಅತ್ತಿಮಬ್ಬೆಯನ್ನೂ, ಆಕೆಯ ದಾನಚಿಂತಾಮಣಿ ಪ್ರಶಸ್ತಿಯನ್ನೂ ಅನೇಕ ಶಾಸನಗಳೂ ಸಹ ಹೆಸರಿಸುತ್ತ ಆಕೆಯನ್ನು ನೆನೆಯುತ್ತ ಬಂದಿವೆ. ಅವುಗಳಲ್ಲಿ ನನ್ನ ಗಮನಕ್ಕೆ ಕಂಡುಬಂದ ಕೆಲವು ಶಾಸನಗಳು ಇಷ್ಟು :

1. SII. XI-i-53. 1007 (8) ಲಕ್ಕುಂಡಿ
2. ಅದೇ : 52 : 1007 (8) ಮತ್ತು ಸು. 1180 ( ?)
3. ಅದೇ : 77. ಸು. 1018 ಪೊಟ್ಟಲಕೆರೆ.
4. KI. 1.17. A.D. 1055 ಶಿಗ್ಗಾವಿ.
5. SII. IX-1. 121. 1057. ಶಿವಪುರ, ನಂದಿಕೊಟ್ಕೂರುತಾ, ಕರ್ನೂಲು ಜಿಲ್ಲೆ, ಆಂಧ್ರ
6. SII. XI-i. 103. 1065. ನಂದವಾಡಿಗೆ
7. EI. XV. 1084.
8. JSI (ಪುಟ. 229) 1094.
9. EC. II. 73. 1118. ಶ್ರವಣಬೆಳ್ಗೊಳ
10. ಅದೇ : 484(351) 1119.
11. ಅದೇ : 162(132). 1123.
12. ಅದೇ ; 532 (384). 1135.
13. ಅದೇ : IV. ನಾಗಮಂಗಲ 94. 1142.
14. ಅದೇ : VIII ನಗರ 37. ಹುಂಚ. 1147.
15. SII. XVIII. 151. 1148. ನೀರಲ್ಲಿ
16. EC. V. ಅರಸೀಕೆರೆ 141. 1159.
17. ಅದೇ : VIII ಸಾಗರ 159. ಹೆರಕೆರೆ ಕ್ರಿ.ಶ. 1159.
18. MAR 1943 No. 15 ಗೋರೂರು ಕ್ರಿ.ಶ. 1170
19. EC. 11. ಶ್ರಬೆ 124. 1182.
20. ಅದೇ VII. ಶಿಕಾರಿಪುರ 232. 1200
21. ಅದೇ VIII. ಸೊರಬ 140. ಕಾಲ ?
22. ಅದೇ : ಸೊರಬ 354. ಕಾಲ?

ಹೀಗೆ ಇನ್ನೂ ಕೆಲವು ಶಾಸನಗಳಲ್ಲಿ ಅತ್ತಿಮಬ್ಬೆಯ ಗುಣಗಾನ ಕೇಳಿ ಬರುತ್ತದೆ. ಆಚಂದ್ರಾರ್ಕ ಕೀರ್ತಿಗೆ ಪಾತ್ರಳಾದ ಅತ್ತಿಮಬ್ಬೆಯನ್ನು ಕುರಿತು ದೊರೆತ ಮಾಹಿತಿಗಳಲ್ಲಿ ಆಕೆಯ ಕೊನೆಯ ದಿನಗಳ ಚಿತ್ರಣ ಕಣ್ಮರೆಯಾಗಿದೆ. ಆದರೆ ಇದುವರೆಗೆ ಬೇರೆ ಯಾವ ವಿದ್ವಾಂಸರೂ ಪ್ರಸ್ತಾಪಿಸದಿರುವ ಎರಡು ಹೊಸ ಮಾಹಿತಿಗಳನ್ನಿಲ್ಲಿ ಚರ್ಚಿಸಬೇಕು. ಈ ಎರಡು ಪ್ರಕಟಿತ ಶಾಸನಗಳಲ್ಲಿ ಒಂದು ಬಹುಮುಕ್ಕಾಗಿ ಹೋಗಿದ್ದು ವಿನೊಂದು ಸ್ಪಷ್ಟವಾಗುತ್ತಿಲ್ಲ: (SII. XV. 561 ಸು. 12 ಶ. ಪುಟ. 376). ಇದರಲ್ಲಿ ಮೊದಲನೆಯ ಸಾಲು ಹೀಗಿದೆ – ಸ್ವಸ್ತಿ ಸಮಸ್ತ...... ಗುಣಸಂಪಂನೆ ದಾನವಿನೋದೆ ಯಾ (ಸ್ವ)ರ ಪಾದ ಪಂಕಜ ಭ್ರಮರೆಯಪ್ಪ ಶ್ರೀ... (ತ್ರುಟಿತ). ಲಕ್ಕುಂಡಿಯಲ್ಲೇ ಇದು ದೊರೆತ ಶಾಸನವೆಂಬುದರಿಂದಲೂ, ದಾನ ವಿನೋದೆ ಎಂಬ ಪ್ರಶಸ್ತಿ ಪ್ರಯೋಗ ವಾಗಿರುವುದರಿಂದಲೂ, ಅತ್ತಿಮಬ್ಬೆಯ ಪ್ರಸ್ತಾಪ ಬಂದಿದೆಯೆಂದು ತಿಳಿಯಲು ಬಾಧಕವಿಲ್ಲ.

26. ಬಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾ॥ ಕುಂಟೋಜಿಯಲ್ಲಿ ಈಶ್ವರನ ಗುಡಿಯ್ಯ ಹತ್ತಿರವಿರುವ ಪಾಳು ಬಾವಿಯ ಬಳಿ ಬಿದ್ದಿರುವ ತುಂಡಾದ ಕಲ್ಲಿನ ಮೇಲಿರುವ ಶಾಸನ ಭಾಗ ಮಾತ್ರ ದೊರೆತಿದೆ ; ಇದರ ಇನ್ನೊಂದು ತುಂಡು ಕಳೆದು ಹೋಗಿದೆ [South Indian Inscriptions, Vol. XI-Part-i. No. 77. (Bombay Karnatak No. 37 of 1929-30) ಕಾಲ. ?]. ಈ ಶಾಸನವು ಕಲ್ಯಾಣ ಚಾಲುಕ್ಯರ ಜಗದೇಕಮಲ್ಲ ಜಯಸಿಂಹ ದೇವನ (1016-1042) ಆಳ್ವಿಕೆಯಲ್ಲಿ ರಚಿತವಾಗಿದೆ. ಅಂತರ ಬಾಹ್ಯ ಪ್ರಮಾಣಾಧಾರಗಳಿಂದ ಈ ಶಾಸನವು ಸು. ಕ್ರಿ. ಶ. 1018 ರಲ್ಲಿ ರಚಿತವಾಗಿದೆಯೆಂದು ಊಹಿಸಬಹುದು. ಚಾಲುಕ್ಯರ ರಾಜಧಾನಿಯು ಇನ್ನೂ ಪೊಟ್ಟಲ ಕೆರೆಯೇ ಆಗಿದ್ದಾಗ ಈ ಶಾಸನ ಬರೆಯಲ್ಪಟ್ಟಿದೆ. ಆಗಿನ್ನೂ ಅತ್ತಿಮಬ್ಬೆ ಜೀವಿಸಿದ್ದಿರಬಹುದು ಅಥವಾ ಆಕೆಯ ಮರಣವನ್ನು ಕುರಿತ ಪ್ರಸ್ತಾಪವೇನಾದರೂ ಇದರ ಉಳಿದ ನಷ್ಟ ಭಾಗದಲ್ಲಿ ಬಂದಿರಲೂಬಹುದು. ಅಂತೂ ಇದು ಅತ್ತಿಮಬ್ಬೆಯ ಜೀವಿತಾವಧಿಗೆ ಸಂಬಂಧಿಸಿ ದಂತೆ ಉಪಲಬ್ಧವಾಗಿರುವ ಕಟ್ಟಕಡೆಯ ಶಾಸನವೆಂಬ ಐತಿಹಾಸಿಕ ಮಹತ್ವವೂ ಈ ಶಾಸನಕ್ಕೆ ಇದೆ. ಏಕೆಂದರೆ ಇದರ ತರುವಾಯ ಸಿಗುವ ಮತ್ತು ಅತ್ತಿ ಮಬ್ಬೆಯನ್ನು ಪ್ರಸ್ತಾಪಿಸುವ ಶಾಸನಗಳೆಲ್ಲ ಆಕೆಯ ಮರಣೋತ್ತರ ಶಾಸನಗಳು :

1. ಸ್ವಸ್ತಿ ಸಮಸ್ತ ಭುವನಾಶ್ರಯಂ ಶ್ರೀ ಪ್ರಿಥ್ವೀ
2. ವಲ್ಲಭಂ ಮಹಾರಾಜಾಧಿರಾಜ ಪರಮೇ
3. ಶ್ವರಂ ಪರಮಭಟ್ಟಾರಕಂ ಸತ್ಯಾಶ್ರಯಕು

4. ಳ ತಿಳಕಂ ಚಾಳುಕ್ಯಾಭರಣಂ ಶ್ರೀಮ
5. ಜ್ಜಗದೇಕ ಮಲ್ಲದೇವರ ರಾಜ್ಯಮು
6. ತ್ತರೋತ್ತರಾಭಿವ್ರಿದ್ಧಿ ಪ್ರವರ್ದ್ಧನಮಾಚ
7. ನ್ದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ಪೊಟ್ಟಳ
8. ಕೆಜ಼ೆಯ ನೆಲೆವೀಡಿನೊಳು ಸ್ವಸ್ಥ್ಯನವ
9. ರತ ಪರಮ ಕಲ್ಯಾಣಾಭ್ಯುದಯ
10. ಸಹಸ್ರ ಫಳಭೋಗ ಭಾಗಿನಿ ದಾ
11. ನ ಚಿನ್ತಾಮಣಿ ಯಾಶ್ರಿತ ಜನ ಕಲ್ಪಲ
12. ತೆ(ಯಂತೆ) ಜಿನರೂಪೆ (ವಿಳಾಸ)
13. ವತಿ ಸಕಳ ಕಳಾವತಿ ಸ್ವಸ್ತಿ

ಇಷ್ಟು ಭಾಗ ಮಾತ್ರ, ಇಬ್ಭಾಗವಾಗಿರುವ ಕಲ್ಲು ಚಪ್ಪಡಿಯ ಶಾಸನದಿಂದ ಸಿಕ್ಕಿದೆ. ಇದು ಆಕೆಯ ಜೀವಿತಾವಧಿಯ ಉತ್ತರ ಗಡುವನ್ನೂ ಸೂಚಿಸುವ ಶಾಸನ.

27. ಈ ಕುಂಟೋಜಿ ಶಾಸನದ ಕಾಲ ಸು. 1018 ಎಂದು ಭಾವಿಸಬಹುದೆಂದು ತಿಳಿಸಿದ್ದೇನೆ. ಮತ್ತು ಇದೇ ಸಂಪ್ರಬಂಧದಲ್ಲಿ ಇನ್ನೊಂದು ಕಡೆ ಅತ್ತಿಮಬ್ಬೆ ಸು. ಕ್ರಿ. ಶ. 950 ರಲ್ಲಿ ಜನಿಸಿರಬಹುದೆಂದು ಸೂಚಿಸಿದ್ದೇನೆ. ಆದರಿಂದ ಆಕೆ ಕ್ರಿ. ಶ. 950 ರಿಂದ 1018ರ ವರೆಗೆ ಸುಮಾರು 68 ವರ್ಷಗಳು ಬದುಕಿದ್ದಿರ ಬಹುದೆಂದು ಕಂಡು ಬರುತ್ತದೆ. ಈ ಅವಧಿಯಲ್ಲಿ ಆಕೆ ಈವಗುಣ–ಕಾವಗುಣ ಗಳಿಂದ, ವರ್ಚಸ್ವೀ ವ್ಯಕ್ತಿತ್ವದಿಂದ ತನ್ನ ಸಮಕಾಲೀನ ಸಮಾಜದಲ್ಲಿ ಅಗ್ರಗಣ್ಯ ಳಾಗಿ ಆದರ್ಶದ ಚರಮ ಸೀಮೆ ತಲಪಿದ್ದಳು. ಜೈನಧರ್ಮದಲ್ಲಿ ಅತುಳವಾದ ನಂಬಿಕೆಯಿಂದ, ಅದರ ಏಳಿಗೆಗಾಗಿ ಪಟ್ಟಶ್ರಮ ಮತ್ತು ಕೊಟ್ಟ ಕೊಡುಗೆ, ಮಾಡಿದ ತ್ಯಾಗಗಳು ಆಕೆಯನ್ನು ಆದರ್ಶ ಶ್ರಾವಕಿಯನ್ನಾಗಿಸಿವೆ. ಕರ್ನಾಟಕ ಸಂಸ್ಕೃತಿಯ ಸಾರಸ್ವರೂಪಿಣಿಯಾದ ಅತ್ತಿಮಬ್ಬೆಯ ಜೀವನದ ಸುವರ್ಣ ರೇಖೆ ಗಳನ್ನು ಲಕ್ಕುಂಡಿ ಶಾಸನ ಪ್ರಭಾವಶಾಲಿಯಾಗಿ ದಾಖಲಿಸಿದೆ. ಲಕ್ಕುಂಡಿಯ ಶಾಸನ ರಚಿಸಮಾಗುವ ವೇಳೆಗೆ ಅತ್ತಿಮಬ್ಬೆಯ ಮಗ ಅಣ್ಣಿಗ ದೇವನಿಗೂ ಸುಮಾರು ನಲವತ್ತೈದು ವರ್ಷ ವಯಸ್ಸಾಗಿತ್ತೆಂದು ತೋರುತ್ತದೆ.

28. ಅತ್ತಿಮಬ್ಬೆ ಸನ್ಯಾಸವನ್ನು ಸ್ವೀಕರಿಸಲಿಲ್ಲ ; ಸನ್ಯಾಸದ ನಿಷ್ಠುರ ನಿಯಮ ಬಿಡಲಿಲ್ಲ. ದೀಕ್ಷೆ ತೆಗೆದುಕೊಳ್ಳಲಿಲ್ಲ ; ಉಗ್ರ ದೀಕ್ಷೆಯ ವ್ರತ ನಿಯಮಗಳನ್ನು ಪಾಲಿಸಿದಳು. ಯೋಗಗಳಲ್ಲಿ ಸಂಸಾರ ಯೋಗವೇ ರಾಜಯೋಗವೆಂಬ ಲಕ್ಷಣಕ್ಕೆ ಯೋಗ್ಯ ಲಕ್ಷ್ಯವಾದಳು, ಗೃಹ ತಪಸ್ವಿನಿಯಾದಳು. ಸಂಸಾರ ಯೋಗದಲ್ಲಿ ಪದ್ಮ ಪತ್ರದಂತೆ ನಿರ್ಲಿಪ್ತ ಚಿತ್ತಸ್ಥಿತಿಯಿಂದ ಬಾಳಿ ಪಾರಾದಳು ; ಈಸಿದಳು,

ಈಜಿ ಜೈಸಿದಳು. ಅತ್ತಿಮಬ್ಬೆ ಪಲಾಯನವಾದಿಯಲ್ಲ, ಬದುಕಿನ ಸವಾಲು ಗಳನ್ನು ಎದುರಿಸಿದ ದಿಟ್ಟೆ. ತಂಗಿಯಂತೆ ಸಹಗಮನದಿಂದ ಮಹಾ ಸತಿಯಾಗಬಹುದಿತ್ತು. ಅವು ಯಾವುದೂ ಆಗದೆ, ಇವು ಎಲ್ಲವೂ ನೀಡುವುದ ಕ್ಕಿಂತ ಎತ್ತರಕ್ಕೇರಿದ ಶೃಂಗ ಸದೃಶ ವ್ಯಕ್ತಿತ್ವವನ್ನು ಸಂಪಾದಿಸಿದಳು. ಅದು ಒಂದೆರಡು ವರ್ಷಗಳಲ್ಲಿ ಬಂದುದಲ್ಲ. ಸಂಗ್ರಹಿಸಿ ಹೇಳುವುದಾದರೆ ಆಕೆಯ ಜೀವನ ಪಥ ಹೂ ಚೆಲ್ಲಿದ ಹಾದಿಯಲ್ಲ. ಕಲ್ಲು ಮುಳ್ಳುಗಳ, ಕಷ್ಟದ, ಸವಾಲುಗಳ ಹಾದಿಯಲ್ಲಿ ಧೃತಿಗೆಡದೆ ಹೆಜ್ಜೆಯೂರಿ ಮುನ್ನಡೆದಳು. ತನ್ನ ಹಿಂದೆ ಶತಮಾನ ಗಳವರೆಗೆ ಅಚ್ಚಳಿಯದ ಹೆಜ್ಜೆ ಗುರುತುಗಳನ್ನು ಬಿಟ್ಟು ನಡೆದಳು.

# ಕಿಟೆಲ್-ಕೋಶ : ನಿಘಂಟುರಚನಾವೈಜ್ಞಾನಿಕ ಅವಲೋಕನ

ವಿಲ್ಯಂ ಮಾಡ್ತ

## ಪ್ರಸ್ತಾವನೆ

ಭಾರತದಲ್ಲಿ 'ಶಬ್ದಕೋಶ'ಗಳ ನಿರ್ಮಾಣ ಬಹು ಪ್ರಾಚೀನ ಎಂಬುದಕ್ಕೆ ಯಾಸ್ಕನ ನಿರುಕ್ತವೇ ಸಾಕ್ಷಿ. ಕನ್ನಡದಲ್ಲಿಯೂ ಕಿಟೆಲನಿಗಿಂತ ಬಹು ಪೂರ್ವದಲ್ಲಿಯೇ 'ಶಬ್ದಕೋಶ' ರಚನೆಯಾಗಿದೆ. ರನ್ನಕಂದ (ಕ್ರಿ.ಶ. 10ನೇ ಶತಮಾನ) ಇದಕ್ಕೆ ದೊರೆತ ಒಂದು ಪ್ರಾಚೀನ ಉದಾಹರಣೆ. ಈ ಪ್ರಾಚೀನ ದೇಶೀ ಶಬ್ದಕೋಶಗಳೆಲ್ಲವೂ ಹೆಚ್ಚಾಗಿ ಸಂಸ್ಕೃತ ಮಾದರಿಗಳಿಂದ ಪ್ರೇರೇಪಿತವಾದವುಗಳು. ಇವುಗಳಲ್ಲಿ ಪ್ರತಿಷ್ಠಿತ ಕಾವ್ಯಗಳಿಂದ ಶಬ್ದಗಳನ್ನು ಆರಿಸಿ ಅವುಗಳಿಗೆ ಅದೇ ಭಾಷೆಯಲ್ಲಿ ಅರ್ಥಗಳನ್ನು ಸೂಚಿಸಲಾಗಿದೆ. ಕಾರಣ, ಅವು ಏಕಭಾಷಿಕ ಶಬ್ದಕೋಶಗಳು. ಗ್ರಂಥಸ್ಥ ಸಾಹಿತ್ಯದ ಹೊರಗಿನ ಶಬ್ದಭಂಡಾರಕ್ಕೆ ಇವುಗಳಲ್ಲಿ ಅವಕಾಶವಿಲ್ಲ. ಅಷ್ಟೇ ಅಲ್ಲದೆ, ಇಲ್ಲಿ ಉಕ್ತವಾದ ಶಬ್ದರೂಪಗಳನ್ನು ಭಾಷಾವಿಶ್ಲೇಷಣೆಯ ಆಧಾರದ ಮೇಲೆ ನಿರ್ಣಯಿಸದೆ ಕವಿರೂಢಿಯ ಆಧಾರದ ಮೇಲೆ ನಿರ್ಣಯಿಸಲಾಗಿದೆ. ಇವುಗಳಲ್ಲಿ ಶಬ್ದೋಚ್ಚಾರ ಮತ್ತು ಪರ್ಯಾಯಗಳು ಅಲ್ಲದೆ, ನುಡಿಗಟ್ಟು, ವಾಕ್ಯ, ಗಾದೆ ಇವೇ ಮೊದಲಾದ ರೂಪಗಳ ಪ್ರಯೋಗಗಳು ಯಾವುವೂ ಸಾಮಾನ್ಯವಾಗಿ ದೊರೆಯಲಾರವು. ಈ ಕಾರಣಗಳಿಂದಾಗಿ ಇವು ಕನ್ನಡದ ಸರ್ವಸಂಗ್ರಾಹಕ ಶಬ್ದಕೋಶಗಳಲ್ಲ.

ಕ್ರೈಸ್ತ ಮಿಷನರಿಗಳು ಕನ್ನಡನಾಡಿಗೆ ಬಂದಾಗ ತಮ್ಮ ಸಲುವಾಗಿ ಕನ್ನಡ ಶಬ್ದಕೋಶಗಳನ್ನು ರಚಿಸುವುದು ಅನಿವಾರ್ಯವಾಯಿತು. ಈ ಸಂದರ್ಭದಲ್ಲಿ 17 ನೆಯ ಶತಮಾನದಲ್ಲಿ ಕರ್ನಾಟಕದ ಶ್ರೀರಂಗಪಟ್ಟಣದಲ್ಲಿ ಕ್ರೈಸ್ತ ಮಿಷನ್ ಸ್ಥಾಪಿಸಿದ ಯೇಸು ಸಮಾಜ (Society of Jesus/Jesuits)ದ ಸನ್ಯಾಸಿ ಲಿಯೊನಾರ್ದೊ ಚಿನ್ನಾಮಿ ಸ್ವಾಮಿಯವರು (1609-1676) ಕನ್ನಡ ವ್ಯಾಕರಣ ಹಾಗೂ ಕನ್ನಡ ಶಬ್ದಕೋಶ ರಚಿಸಿದರೆಂಬ ಉಲ್ಲೇಖ ದೊರಕುತ್ತದೆ ; ಇವು ಹೊಸಗನ್ನಡದ ಪ್ರಪ್ರಥಮ ಗ್ರಂಥಗಳೂ ಹೌದೆಂದು ಹಾವನೂರು (ಪು.88) ಅಭಿಪ್ರಾಯಪಡುತ್ತಾರೆ. ದುರ್ದೈವವಶಾತ್ ಅವು ಇನ್ನೂ ತನಕ ನಮಗೆ ಉಪಲಬ್ಧವಾಗಿಲ್ಲ. ಮಿಷನರಿಗಳು ಸಂಪಾದಿಸಿದ ಕನ್ನಡ ಶಬ್ದಕೋಶಗಳಲ್ಲಿ ಡಾ. ಡಬ್ಲ್ಯು ರೀವ್ ಅವರ (A Dictionary, Carnataka and English 1832) ಪ್ರಥಮ ಹಾಗೂ ಪ್ರಸಿದ್ಧ. ಆದರೆ ಪ್ರಸ್ತುತ ಶಬ್ದಕೋಶ ಸರ್ವಸಂಗ್ರಾಹಕವಾಗಿರದೆ ಇದ್ದುದರಿಂದ ಅಂದಿನ ಬ್ರಿಟಿಷ ಸರಕಾರ,

ಸಮಗ್ರ ಕನ್ನಡ ಶಬ್ದಕೋಶವೊಂದನ್ನು ರಚಿಸಬೇಕೆಂದು ಕಿಟೆಲ್‌ರನ್ನು ಬಿನ್ನವಿಸಿತು. ರೆ. ಫರ್ಡಿನಾಂಡ್ ಕಿಟೆಲ್ (1832-1903), ಸರಕಾರದ ಈ ಬಿನ್ನಹವನ್ನು ತಿರಸ್ಕರಿಸಿದರೂ ಮುಂದೆ ಬಾಸೆಲ್ ಮಿಷನ್ ಸಮಿತಿಯು ಅದೇ ಮನವಿಯನ್ನು ತಿರಸ್ಕರಿಸಲಾರದೆ ಸಂಪಾದಿಸಲು ಅಂದು ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡು ಇಂದು ಕನ್ನಡ ನಾಡಿನಾದ್ಯಂತ ಪ್ರಾತಃಸ್ಮರಣೀಯರಾದರು ಎಂಬುದು ಮಾತ್ರ ಅಜರಾಮರ ಸತ್ಯ.

ಭಾಷಾವಿಜ್ಞಾನವಾಗಲಿ, ನಿಘಂಟುರಚನಾ ವಿಜ್ಞಾನವಾಗಲಿ ಬೆಳೆದಿರದ ಆ ಕಾಲದಲ್ಲಿ ಸಂಪಾದಿಸಿದ ಕಿಟೆಲ್ ಕೋಶ, ಅಂದಿನಿಂದ ಇಂದಿನವರೆಗೂ ಅದ್ವಿತೀಯ ಕನ್ನಡ ಶಬ್ದಕೋಶವಾಗಿ ಉಳಿದಿರುವುದು ಕಿಟೆಲನ ವೈಜ್ಞಾನಿಕತೆಗೆ ಅಂತೆಯೇ ಸಮರ್ಪಣಾಭಾವಕ್ಕೆ ಜ್ವಲಂತ ಉದಾಹರಣೆ.

ಪ್ರಸ್ತುತ ಅಧ್ಯಯನವನ್ನು ಆರು ಭಾಗಗಳಲ್ಲಿ, ಈ ಕೆಳಗಿನಂತೆ ವಿಭಾಗಿಸಲಾಗಿದೆ:

1.0 ಪಾರಿಭಾಷಿಕ ಪದಗಳು

2.0 ಶಬ್ದಕೋಶಗಳ ವರ್ಗೀಕರಣ

3.0 ಪದಕೋಶರಚನಾ ಪದ್ಧತಿ

4.0 ಕಿಟೆಲ್ ಕೋಶದ ಪದ್ಧತಿ

5.0 ಕಿಟೆಲ್ ಕೋಶದ ಮೌಲ್ಯಮಾಪನ

6.0 ಅನುಬಂಧಗಳು

## 1.0 ಪಾರಿಭಾಷಿಕ ಪದಗಳು

1.1 ನಿಘಂಟು : ನಿಘಂಟಿಮಗಳ ಸಂಗ್ರಹ (stock)ವೇ ನಿಘಂಟು (Lexicon).

1.2 ನಿಘಂಟಿಮ : ನಿಘಂಟಿನಲ್ಲಿ ಸ್ವತಂತ್ರವಾಗಿ ಬರಬಹುದಾದ ಭಾಷಾಘಟಕವೇ ನಿಘಂಟಿಮ (Lexeme). ಸಾಮಾನ್ಯವಾಗಿ, ನಿಘಂಟಿಮವನ್ನು ಶಬ್ದ/ಪದ (Word) ಎಂದು ಕರೆಯುತ್ತಾರೆ. ಆದರೆ, ಭಾಷಾವೈಜ್ಞಾನಿಕವಾಗಿ ಪದದ ವ್ಯಾಖ್ಯೆಯನ್ನು ಕೊಡುವುದು ಇತ್ತೀಚೆಗೆ ದುಸ್ಸಾಧ್ಯವೆನಿಸಿದೆ.

ಎಲ್ಲ ಪದಗಳೂ ನಿಘಂಟಿಮಗಳಾದರೂ, ಎಲ್ಲ ನಿಘಂಟಿಮಗಳು ಪದಗಳಾಗಬೇಕಾಗಿಲ್ಲ. ಉದಾಹರಣಾರ್ಥವಾಗಿ ಈ ಕೆಳಗಿನವುಗಳನ್ನು ಗಮನಿಸಿ :

(ಅ) "ಮನೆ"–ಎಂಬ ರೂಪ ಪದವೂ ಹೌದು, ನಿಘಂಟಿಮವೂ ಹೌದು. ಆದರೆ ಅದಕ್ಕೆ-ಗೆ ಎಂಬ ಅಂತ್ಯಪ್ರತ್ಯಯ (suffix) ಸೇರಿಸಿದಾಗ ಉತ್ಪನ್ನಗೊಳ್ಳುವ "ಮನೆಗೆ" ಎಂಬ ರೂಪವನ್ನು ಒಂದು ಎಂದು ಪರಿಗಣಿಸಬೇಕೆ ಅಥವಾ ಹಲವೆಂದು ?

(ಆ) -ಗೆ,-ಇಂದ ಎಂಬಿತ್ಯಾದಿ ರೂಪಗಳು ನಿಘಂಟಿಮಗಳು ಹೌದು; ಆದಾಗ್ಯೂ ಅವು ಪದಗಳೆಂದು ಪರಿಗಣಿಸಲಾರವು. ಯಾಕೆ ?

(ಇ) sick-room, letter-box, three-and-a-half-year-old-girl ಎಂಬೀ ರೂಪಗಳು ಏಕ ಪದಗಳೊ ಅನೇಕ ಪದಗಳು ? ಇತ್ಯಾದಿ ಚರ್ಚೆಗಳು ವೈಯಾಕರಣಿಗಳಲ್ಲಿ ನಡೆಯುತ್ತಲೇ ಇರುವುದರಿಂದ ಭಾಷಾವಿಜ್ಞಾನಿಗಳು ಪಾರಿಭಾಷಿಕವಾಗಿ ಪದ/ಶಬ್ದ ಎಂಬ ಪ್ರಯೋಗವನ್ನು ಕೈಬಿಟ್ಟು ಈ ಸಂದರ್ಭದಲ್ಲಿ 'ನಿಘಂಟಿಮ' ಎಂಬ ಪರಿಭಾಷೆಯನ್ನು ಬಳಸುವುದೇ ಸರ್ವಸಾಮಾನ್ಯ.

1.3 **ಶಬ್ದ ಪದಕೋಶ :** ನಿಘಂಟಿನಿಂದ ಆಯ್ದು ಆಕಾರಾದಿಯಲ್ಲಿ ವ್ಯವಸ್ಥೆಗೊಳಿಸಲಾದ ನಿಘಂಟಿಮಗಳ ಸಂಯೋಜನೆಯೇ Dictionary. ಇದನ್ನು 'ವಾಕ್ಸರಿ' ಎಂದು ಕರೆಯಬಹುದಾದರೂ ಕನ್ನಡದಲ್ಲಿ ಚಾಲ್ತಿಯಲ್ಲಿರುವ ಶಬ್ದ/ಪದಕೋಶ ಎಂಬ ಪದವನ್ನೇ, ಬಿಡಲಾರದೆ ಬಳಸಿಕೊಂಡಿದ್ದೇವೆ.

1.4 **ನಿಘಂಟು ವಿಜ್ಞಾನ :** ನಿಘಂಟು ರಚನೆಯ ಸೈದ್ಧಾಂತಿಕ ವಿವೇಚನೆ (Theory)ಯೇ ನಿಘಂಟು ವಿಜ್ಞಾನ (Lexicology). ಈ ಶಿಸ್ತಿನಲ್ಲಿ ನಿಘಂಟಿಮಗಳ ಅರ್ಥವಿವೇಚನೆ (Lexical semantics) ಮಾಡಲಾಗುತ್ತದೆ.

1.5 **ನಿಘಂಟು ರಚನಾ ವಿಜ್ಞಾನ :** ನಿಘಂಟು ವಿಜ್ಞಾನದ ಅನ್ವಯ (Praxis)ವೇ ನಿಘಂಟು ರಚನಾ ವಿಜ್ಞಾನ (Lexicography). ಈ ಶಿಸ್ತಿನಲ್ಲಿ ಶಬ್ದಕೋಶ ರಚನೆಯಲ್ಲಿ ಅನುಸರಿಸಬೇಕಾದ ಪದ್ಧತಿ (Methodology) ಯನ್ನು ಹೆಜ್ಜೆ ಹೆಜ್ಜೆಯಾಗಿ ವಿವರಿಸಲಾಗುತ್ತದೆ.

## 2.0 ಶಬ್ದಕೋಶಗಳ ವರ್ಗೀಕರಣ

ಸ್ವರೂಪವನ್ನು ಅನುಲಕ್ಷಿಸಿ ಶಬ್ದಕೋಶಗಳನ್ನು ಏಕಕಾಲಿಕ (Synchronic) ಮತ್ತು ಬಹುಕಾಲಿಕ (Diachronic) ಗಳೆಂದು ವರ್ಗೀಕರಿಸುತ್ತಾರೆ. ಭಾಷಾ ಬೆಳವಣಿಗೆಯ ಯಾವುದಾದರೂ ಒಂದು ಘಟ್ಟಕ್ಕೆ ಸೀಮಿತವಾಗಿರುವ ನಿಘಂಟಿಮಗಳ ಸಂಯೋಜನೆಗಳೇ ಏಕಕಾಲಿಕ ಶಬ್ದಕೋಶಗಳು.

ಭಾಷಾ ಬೆಳವಣಿಗೆಯ ಅನೇಕ ಘಟ್ಟಗಳಿಗೆ ಸೇರಿದ ನಿಘಂಟಿಮಗಳ ಸಂಯೋಜನೆಗಳೇ ಬಹುಕಾಲಿಕ ಶಬ್ದಕೋಶಗಳು.

ಏಕಕಾಲಿಕ ಶಬ್ದಕೋಶಗಳು ಒಂದು ಜ್ಞಾನಕ್ಷೇತ್ರಕ್ಕೆ ಅಥವಾ ವಲಯಕ್ಕೆ ಸೀಮಿತಗೊಂಡರೆ ಅವುಗಳನ್ನು ನಿರ್ಬಂಧಿತ (Restricted) ಶಬ್ದಕೋಶಗಳೆಂದು ಕರೆಯುತ್ತಾರೆ. ವೃತ್ತಿ ಪದಕೋಶ (Occupational Dictionary), ತಾಂತ್ರಿಕ ಪದಕೋಶ (Technical Dictionary), ಭಾಷ್ಯಕೋಶ (Exegtic Dictionary), ವಿಶ್ವಕೋಶ (Encyclopedia), ಅನುಕ್ರಮಿಕ ಕೋಶ (Concordance), ಸೂಚಿ (Index), ಉದ್ಧರಣಾ ಕೋಶ (Citation Dictionary), ಸಂಕ್ಷೇಪ ಸೂಚಿ (Abbreviation Index), ಸಮಾನಾರ್ಥಕ ಪದಕೋಶ (Dictionary of Synonyms), ವಿರುದ್ಧಾರ್ಥಕ ಪದಕೋಶ (Dictionary of Antonyms), ಕಠಿಣ ಶಬ್ದಾರ್ಥಕೋಶ (Glossary) ಇತ್ಯಾದಿಗಳು ನಿರ್ಬಂಧಿತ ಪದಕೋಶಗಳಿಗೆ ಉತ್ತಮ ಉದಾಹರಣೆಗಳು.

ಯಾವುದೇ ಸೀಮಿತ ವಲಯಕ್ಕೆ ನಿರ್ಬಂಧಗೊಳಿಸದೆ ಸಂಯೋಜಿಸಿದ ಶಬ್ದಕೋಶಗಳನ್ನು ಸಾಮಾನ್ಯ (General) ಶಬ್ದಕೋಶಗಳೆಂದು ಕರೆಯುತ್ತಾರೆ. ಇವು ಪ್ರಮಾಣ/ಸಾಹಿತ್ಯಿಕ ಭಾಷೆಯ ನಿಘಂಟಿಮಗಳು ಮತ್ತು ಅವುಗಳ ಪ್ರಯೋಗಗಳಿಗೆ ಸೀಮಿತವಾಗಿ ಸಂಯೋಜಿತಗೊಂಡರೆ ಅವುಗಳನ್ನು ನಿರ್ದಿಷ್ಟ ವಿವರಣಾತ್ಮಕ ಶಬ್ದಕೋಶ (Standard Descriptive Dictionary) ಗಳೆಂದು ಕರೆಯುತ್ತಾರೆ. ಅದರ ಬದಲಾಗಿ, ಪ್ರಮಾಣ ನಿಘಂಟಿಮಗಳ ಜೊತೆ ಜೊತೆಗೆ ಗ್ರಾಮ್ಯ ರೂಪಗಳು, ಉಪಭಾಷಾ ನಿಘಂಟಿಮಗಳು, ಅಪರೂಪ ನಿಘಂಟಿಮಗಳು, ಪ್ರಾಚೀನ ರೂಪಗಳು, ತಾಂತ್ರಿಕ ಪದಗಳು, ವೃತ್ತಿಪದಗಳು, ಜನಪದ ಭಾಷಾರೂಪಗಳು ಇತ್ಯಾದಿ ವಿವರಗಳನ್ನೂ ಪ್ರಯೋಗಗಳನ್ನೂ ಸೇರಿಸಿ ಶಬ್ದಕೋಶಗಳನ್ನು ರಚಿಸಿದರೆ ಅವುಗಳನ್ನು ಸರ್ವಸಂಗ್ರಾಹಕ ವಿವರಣಾತ್ಮಕ (Overall Descriptive Dictionary) ಗಳೆಂದು ಹೆಸರಿಸುತ್ತಾರೆ. ಇವೆಲ್ಲವೂ ಏಕಕಾಲಿಕ ಶಬ್ದಕೋಶಗಳು.

ಬಹುಕಾಲಿಕ ಶಬ್ದಕೋಶಗಳಲ್ಲಿ ಸಾಮಾನ್ಯವಾಗಿ ಐತಿಹಾಸಿಕ (Historical) ಮತ್ತು ವ್ಯುತ್ಪತ್ತಿಕ (Etymological) ಶಬ್ದಕೋಶಗಳೆಂದು ಎರಡು ತೆರ. ಐತಿಹಾಸಿಕ ಶಬ್ದಕೋಶ, ನಿಘಂಟಿಮಗಳ ರೂಪಿಕ ಹಾಗೂ ಅರ್ಥಾತ್ಮಕ ಬದಲಾವಣೆಗಳನ್ನು ಕಾಲಾನುಕ್ರಮವಾಗಿ ಸೂಚಿಸಿದರೆ, ವ್ಯುತ್ಪತ್ತಿಕ ಶಬ್ದಕೋಶ, ನಿಘಂಟಿಮಗಳ ವ್ಯುತ್ಪತ್ತಿ ಹಾಗೂ ಅವುಗಳ ರೂಪಿಕ ಬದಲಾವಣೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುತ್ತದೆ. ಒಟ್ಟಿನಲ್ಲಿ, ಇವು ಒಂದು ಭಾಷೆಯ ಬೆಳವಣಿಗೆಯ ವಿವಿಧ ಘಟ್ಟಗಳಲ್ಲಿ ಕಂಡುಬರುವ ನಿಘಂಟಿಮಗಳ ವೈವಿಧ್ಯತೆಗಳನ್ನು ಗುರುತಿಸುತ್ತವೆ.

ಶಬ್ದಕೋಶಗಳ ಪ್ರಮುಖ ರೌಪಿಕ ವರ್ಗೀಕರಣವನ್ನು ಈ ಕೆಳಗಿನಂತೆ ವೃತ್ತ ಚಿತ್ರದಲ್ಲಿ ನಮೂದಿಸಬಹು :




ಸ್ವರೂಪದ ಬದಲಾಗಿ ಗಾತ್ರವನ್ನು ಆಧರಿಸಿ, ಶಬ್ದಕೋಶಗಳನ್ನು ಬೃಹತ್ಕೋಶ (Thesqurees) ಮಧ್ಯಮಪದಕೋಶ (Concise Dictionary) ಮತ್ತು ಚಿಕ್ಕ ಪದಕೋಶ (Pocket Dictionary) ಎಂದು ವರ್ಗೀಕರಿಸುತ್ತಾರೆ. ಬೃಹತ್ಕೋಶದಲ್ಲಿ ಸುಮಾರು 40,000ಕ್ಕಿಂತ ಹೆಚ್ಚಿನ ನಿಘಂಟಿಮುಗಳಿದ್ದು ಅವುಗಳಿಗೆ ಪ್ರಾಚೀನ ಸಾಹಿತ್ಯ ಕೃತಿಗಳಿಂದ ಹಾಗೂ ಕೆಲವೊಮ್ಮೆ ಜನಪದ ಸಾಹಿತ್ಯದಿಂದಲೂ ಪ್ರಯೋಗಗಳನ್ನು ಕೊಡುತ್ತಾರೆ. ಅರ್ಥವಿವರದ ಜೊತೆಗೆ ಅರ್ಥಸೂಕ್ಷ್ಮತೆ (Nuances) ಗಳನ್ನೂ, ಪಠ್ಯ ಸಂದರ್ಭ (Context) ಗಳನ್ನೂ ಸವಿಸ್ತಾರವಾಗಿ ಕೊಡುತ್ತಾರೆ. ಮಧ್ಯಮ ಶಬ್ದಕೋಶಗಳಲ್ಲಿ ಸು. 40,000ಕ್ಕಿಂತ ಕಡಿಮೆ ನಿಘಂಟಿಮುಗಳಿದ್ದು ಅವು ಹೆಚ್ಚಾಗಿ ಚಾಲ್ತಿಯಲ್ಲಿರುವ ರೂಪಗಳಿಗೆ ಸೀಮಿತವಾಗಿರುತ್ತವೆ. ಅಲ್ಲಿ ಪ್ರಯೋಗಗಳು ಕಡಿಮೆ ಪ್ರಮಾಣದಲ್ಲಿರುತ್ತವೆ. ಚಿಕ್ಕ ಶಬ್ದಕೋಶಗಳಲ್ಲಿ ಸು. 10,000 ನಿಘಂಟಿಮುಗಳಿದ್ದು ಸಾಮಾನ್ಯವಾಗಿ ಪ್ರಯೋಗಗಳಿಗೆ ಹಾಗೂ ಇತರ ಮಾಹಿತಿಗಳಿಗೆ ಅಲ್ಲಿ ಅವಕಾಶ ಇರುವುದಿಲ್ಲ.

ಶಬ್ದಕೋಶಗಳ ಈ ವರ್ಗೀಕರಣ ಅನುಕೂಲಕರವೇ ಹೊರತು 'ಇದಮಿತ್ಥಂ' ಸ್ವರೂಪದ್ದಲ್ಲ.

ಭಾಷಾಸಂಖ್ಯಾಕ್ಕನುಗುಣವಾಗಿ, ಶಬ್ದಕೋಶಗಳಲ್ಲಿ ಪ್ರಮುಖವಾಗಿ ಎರಡು ಬಗೆ :

1 ಏಕಭಾಷಿಕ ಶಬ್ದಕೋಶ (Monolingual Dictionary)

2 ದ್ವಿಭಾಷಿಕ ಶಬ್ದಕೋಶ (Bilingual Dictionary)

ಏಕಭಾಷಿಕ ಶಬ್ದಕೋಶಗಳಲ್ಲಿ ಯಾವುದಾದರೊಂದು ಭಾಷೆಯ ನಿಘಂಟಿಮುಗಳ ವಿವರ ಸಿಗುತ್ತದೆ. ದ್ವಿಭಾಷಿಕ ಶಬ್ದಕೋಶಗಳಲ್ಲಿ ಆಕರ ಭಾಷೆ (Source language) ಹಾಗೂ ಉದ್ದಿಷ್ಟ ಭಾಷೆ (Target language) ಗಳ ವಿವರಗಳು ದೊರಕುತ್ತವೆ. ಉದ್ದಿಷ್ಟ ಭಾಷಾಧ್ಯಯನ ಅಧ್ಯಾಪನ ಸಂಶೋಧನಗಳಲ್ಲಿ ಹಾಗೂ ಭಾಷಾಂತರ ಕಾರ್ಯ ಮುಂತಾದ ಶೈಕ್ಷಣಿಕ ಸಂದರ್ಭಗಳಲ್ಲಿ ದ್ವಿಭಾಷಿಕ ಶಬ್ದಕೋಶಗಳು ಅತ್ಯಂತ ಪ್ರಯೋಜನಕಾರಿಯಾಗಿವೆ. ಹಲವು ಉದ್ದಿಷ್ಟ ಭಾಷೆಗಳ ವಿವರಗಳನ್ನು ಕೊಟ್ಟರೆ ಅದನ್ನು ಅನೇಕ ಭಾಷಿಕ ಶಬ್ದಕೋಶ (Multilingual Dictionary) ಎಂದು ಕರೆಯಬಹುದು. ಆದರೆ ತಾಂತ್ರಿಕವಾಗಿ ಅದು ದ್ವಿಭಾಷಿಕ ಶಬ್ದಕೋಶಗಳಿಂದ ತೀರಾ ಭಿನ್ನ ಸ್ವರೂಪದ್ದಲ್ಲ.

ಕಿಟೆಲ್ ಕೋಶದ ಅಧ್ಯಯನಕ್ಕನುಗುಣವಾಗಿ, ಮುಂದಿನ ವಿವೇಚನೆ ದ್ವಿಭಾಷಿಕ ಶಬ್ದಕೋಶಕ್ಕೆ ಸೀಮಿತಗೊಳಿಸಲಾಗಿದೆ.

## 3.0 ಶಬ್ದಕೋಶರಚನಾ ಪದ್ಧತಿ

ಯಾವುದೇ ಭಾಷೆಯ ಶಬ್ದಕೋಶವನ್ನು ವೈಜ್ಞಾನಿಕವಾಗಿ ರಚಿಸುವಲ್ಲಿ ಈ ಕೆಳಗಿನ ಹೆಜ್ಜೆಗಳನ್ನು ಅನುಸರಿಸಬೇಕು.

### 3.1 ಶಬ್ದಕೋಶರಚನೆಯ ಹೆಜ್ಜೆಗಳು

3.1.1 ಕ್ಷೇತ್ರಕಾರ್ಯ (Field-work)

3.1.2 ನಿಘಂಟಿಮುಗಳ ಆಯ್ಕೆ (Selection)

3.1.3 ನಿಘಂಟಿಮುಗಳ ರಚನೆ (Structure)

(1) ನಿಘಂಟಿಮುದ ರೂಪ (Lemma)

(ಕ) ಪ್ರಧಾನ ಪದ (Head-word)

(ಖ) ಉಚ್ಚಾರ (Phonetic form)

(ಗ) ವ್ಯುತ್ಪತ್ತಿ (Etymology)

(ಘ) ಪರ್ಯಾಯ ರೂಪಗಳು (Variants)

(ಙ) ರೂಪವರ್ಗ (Form class)

(ಚ) ವಿಕಾರರೂಪಗಳು (Oblique forms)

(ಛ) ಜ್ಞಾತಿ ಪದಗಳು (Cognates)

(2) ನಿಘಂಟಿಮುದ ಅರ್ಥವಿವರಣೆ (Semantic content)

(ಕ) ಸಮಾನಾರ್ಥಕಗಳು (Equivalents)

(ಖ) ವಿವರಗಳು (Glosses)

(ಗ) ಪ್ರಯೋಗಗಳು (Illustrations)

(3) ನಿಘಂಟಿಮುಗಳ ಆಕಾರಾದಿ ಸಂಯೋಜನೆ (Alphabetical Arrangement)

ವಿ.ಸೂ. : ನಿಘಂಟಿಮುದ ರೂಪ ಹಾಗೂ ಅರ್ಥವಿವರಣೆಗಳ ವಿನ್ಯಾಸದಲ್ಲಿ ಶಬ್ದಕೋಶರಚನಾಕಾರ ಯೋಗ್ಯ ಮಾರ್ಪಾಡುಗಳನ್ನು ಮಾಡ ಬಹುದು.

### 3.1.1 ಕ್ಷೇತ್ರಕಾರ್ಯ :

ಶಬ್ದಕೋಶದ ಗುರಿ ವ್ಯಾಪ್ತಿಗಳನ್ನು ಗಮನಿಸಿ ನಿಘಂಟುಕಾರ (Lexicographer) ಕ್ಷೇತ್ರಕಾರ್ಯವನ್ನು ಮಾಡಬೇಕಾಗುತ್ತದೆ. ಮೌಖಿಕ ಹಾಗೂ ಲಿಖಿತ ಸಾಹಿತ್ಯದ ಪರಿವೀಕ್ಷಣೆ, ಹಬ್ಬಹರಿದಿನಗಳು, ಆಚರಣೆಗಳು, ಉತ್ಸವಗಳು ಮೊದಲಾದ ಸಾಮಾಜಿಕ ಸಂದರ್ಭಗಳಲ್ಲಿ ಭಾಗವಹಿಸುವಿಕೆ (Participation method), ವಿವಿಧ ವೃತ್ತಿ ಕಸಬುಗಳು, ಜಾನಪದ ಅಭಿವ್ಯಕ್ತಕ (Expressive) ಹಾಗೂ ಭೌತಿಕ ಕಲೆ ಮುಂತಾದುವುಗಳನ್ನು ಆಯಾ ಪರಿಸರಗಳಲ್ಲಿಯೇ ಗಮನಿಸಬೇಕಾಗುತ್ತದೆ. ಕ್ಷೇತ್ರ ಕಾಯವನ್ನು ಕೇವಲ ಲಲಿತ ಸಾಹಿತ್ಯ (Creative Literature) ಶೈಲಿಗಳಿಗೆ ಸೀಮಿತಗೊಳಿಸದೆ ಕಾನೂನು, ವಾಣಿಜ್ಯ ಆಡಳಿತವೇ ಮೊದಲಾದ ಪ್ರಾಯೋಜ್ಯ ಸಾಹಿತ್ಯ (Pragmatic literature)ಕ್ಕೂ ವಿಸ್ತರಿಸಿ ಅಲ್ಲಿಯ ತಾಂತ್ರಿಕ ಪದಗಳನ್ನೂ (Technical terms) ಸಂಗ್ರಹಿಸಬೇಕು. ವಾರ್ತಾಪತ್ರಿಕೆಗಳು, ನಿಯತಕಾಲಿಕೆಗಳು, ಆಕಾಶವಾಣಿ, ದೂರದರ್ಶನವೇ ಮುಂತಾದ ಮಾಧ್ಯಮಗಳನ್ನು ಕ್ಷೇತ್ರಕಾರ್ಯಕ್ಕೆ ಒಳಗುಮಾಡಬೇಕು.

ವಿವಿಧ ಭೌಗೋಲಿಕ ಪ್ರದೇಶಗಳ ಹಾಗೂ ವಿವಿಧ ಜಾತಿವರ್ಗಗಳಿಗೆ ಸೇರಿದ ನಿರೂಪಕ (Informants) ರನ್ನು ಸಂಪರ್ಕಿಸಿ ಹಾಗೂ ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳಲ್ಲಿ ಭಾಗವಹಿಸಿ ಅಲ್ಲದೆ ಸಮಸ್ತ ವ್ಯಷ್ಟಿ ಹಾಗೂ ಸಮಷ್ಟಿ ಸಾಹಿತ್ಯ ಕೃತಿಗಳಿಂದ ನಿಘಂಟಿಮುಗಳನ್ನು ಸಂಗ್ರಹಿಸುವಾಗ ಮೇಲುಕೀಳುಗಳೆಂಬ ಭಾವನೆಗಳಿಗೆ ಆಸ್ಪದ ಕೊಡದೆ ಎಲ್ಲ ರೂಪಗಳಿಗೂ ಸಮಾನ ಗೌರವ ಹಾಗೂ ಸ್ಥಾನಮಾನಗಳನ್ನು ನೀಡಬೇಕು.

ಆಯ್ಕೆಗೊಂಡ ನಿರೂಪಕರು ಭಾಷಾಸಮಾಜದ ಯೋಗ್ಯ ಪ್ರತಿನಿಧಿಗಳಾಗಿರಬೇಕು. ಸಮಸ್ಯೆಗಳು ತಲೆ ಎತ್ತಿದಾಗ ಆ ಭಾಷೆಯ ಪರಿಣತರ ಸಲಹೆ ಮಾರ್ಗದರ್ಶನಗಳನ್ನು ಪಡೆದುಕೊಂಡು ಸೂಕ್ತ ಪರಿಹಾರ ದೊರಕಿಸಿಕೊಳ್ಳಬೇಕು. ಈ ದೆಸೆಯಲ್ಲಿ ಲಭ್ಯ ಶಬ್ದಕೋಶಗಳ ಸಹಾಯವನ್ನೂ ಪಡೆದುಕೊಳ್ಳಬೇಕಾಗುತ್ತದೆ.

### 3.1.2 ನಿಘಂಟಿಮಗಳ ಆಯ್ಕೆ

ಕ್ಷೇತ್ರಕಾರ್ಯದಂತೆ ನಿಘಂಟಿಮಗಳ ಆಯ್ಕೆ ಕೂಡಾ ಶಬ್ದಕೋಶದ ಗುರಿ ವ್ಯಾಪ್ತಿಗಳನ್ನು ಅವಲಂಬಿಸಿದೆ. ಕ್ಷೇತ್ರಕಾರ್ಯದ ಮೂಲಕ ದೊರಕಿಸಿಕೊಂಡ ದತ್ತಸಂಗ್ರಹ (Corpus) ದಿಂದ ನಿಘಂಟಿಮಗಳ ಆಯ್ಕೆ ಮಾಡಲಾಗುತ್ತದೆ. ಶಬ್ದಕೋಶದ ಸ್ವರೂಪ ಸರ್ವಸಂಗ್ರಾಹಕವಾದರೆ ವಿವಿಧ ಭೌಗೋಲಿಕ ಪ್ರದೇಶಗಳ, ವಿಭಿನ್ನ ಜಾತಿವರ್ಗಗಳ ಹಾಗೂ ಸರ್ವ ಸಮಾಜೋ ಸಾಂಸ್ಕೃತಿಕ ಸಂದರ್ಭಗಳಲ್ಲಿ ಬಳಕೆಯಾಗುವ ನಿಘಂಟಿಮಗಳನ್ನು ಆಯ್ದುಕೊಳ್ಳಬೇಕು. ವ್ಯಷ್ಟಿ ಸಮಷ್ಟಿ ಸಾಹಿತ್ಯಗಳಿಗೆ, ಲಲಿತ ಪ್ರಾಯೋಜ್ಯ ಕಲೆಗಳಿಗೆ ಸೇರಿದ ಸಾಹಿತ್ಯಿಕ ಮತ್ತು ತಾಂತ್ರಿಕ ಪದಗಳು ; ಶಿಷ್ಟ ಹಾಗೂ ಗ್ರಾಮ್ಯ ರೂಪಗಳು ; ಚಾಲ್ತಿ ಪದಗಳು, ಕ್ವಚಿತ್ತಾಗಿ ಕಂಡುಬರುವ ಪದಗಳು ; ಪುರಾತನ ಹಾಗೂ ಲುಪ್ತ ರೂಪಗಳು ; ಜ್ಞಾತಿ ಪದಗಳು : ಮುಕ್ತ ಹಾಗೂ ಬದ್ಧಾಕೃತಿಮಗಳು, ಸಾಧಿತರೂಪಗಳು, ಸಮಾಸಗಳು, ನುಡಿಗಟ್ಟು ಗಾದೆಗಳು, ಪ್ರತಿಧ್ವನಿತಗಳು, ದ್ವಿರುಕ್ತಿಗಳು, ಬೈಗುಳಗಳು, ಅಶ್ಲೀಲ ಪದಗಳು : ಉದ್ಗಾರಗಳು : ಸಮಾನಾರ್ಥಕಗಳು ಮತ್ತು ವಿರುದ್ಧಾರ್ಥಕಗಳು ಮುಂತಾದ ನಿಘಂಟಿಮಗಳನ್ನು ಸಮಗ್ರವಾಗಿ ಆಯ್ಕೆಮಾಡಿಕೊಳ್ಳುವುದು ಅತ್ಯಗತ್ಯ.

### 3.1.3. ನಿಘಂಟಿಮಗಳ ರಚನೆ

ನಿಘಂಟಿಮದ ರಚನೆಯಲ್ಲಿ ರೂಪ ಮತ್ತು ಅರ್ಥ ಪ್ರಮುಖ ಭಾಗಗಳು.

ನಿಘಂಟಿಮದ ರೂಪ : ನಿಘಂಟಿಮಗಳನ್ನು ಅವುಗಳ ನಿಯಮಿತ ರೂಪ (Canonical form) ಗಳಲ್ಲಿ ನಮೂದಿಸಬೇಕು. ಆರಂಭದಲ್ಲಿ ಪ್ರಧಾನ ಪದವನ್ನು ನಮೂದಿಸಿ ಅದರ ಉಚ್ಚಾರವನ್ನು ಧ್ವನ್ಯಾತ್ಮಕ ಲಿಪಿ (Phonetic script) ಯಲ್ಲಿ ಸೂಚಿಸುವುದು ಹೆಚ್ಚು ಸೂಕ್ತ. ಆ ಬಳಿಕ ಅದರ ಪ್ರವೃತ್ತಿಯನ್ನು ಕೊಟ್ಟು ಅದರ ರೂಪವರ್ಗವನ್ನೂ ವಿಕಾರ ರೂಪಗಳನ್ನೂ ಸೂಚಿಸಿ ಅದಕ್ಕೆ ಸಂಬಂಧಿಸಿದ ಜ್ಞಾತಿಪದಗಳನ್ನು ಕೊಟ್ಟಾಗ ನಿಘಂಟಿಮದ ರೂಪದ ವಿವರಣೆ ಕೊಟ್ಟಂತಾಗುತ್ತದೆ. (ನೋಡಿ : 6.1).

(2) ನಿಘಂಟಿಮದ ಅರ್ಥವಿವರಣೆ : ನಿಘಂಟಿಮದ ರಚನೆಯಲ್ಲಿ ಅದರ ರೂಪವಿವರದಷ್ಟೇ ಅರ್ಥವಿವರವೂ ಪ್ರಮುಖ. ಏಕಭಾಷಿಕ ಶಬ್ದಕೋಶದಲ್ಲಿ ನಿಘಂಟಿಮದ ವ್ಯಾಖ್ಯೆಗೆ ಇಲ್ಲಿ ಅಪ್ರಸ್ತಾನ. ನಿಘಂಟಿಮದ ಅರ್ಥವ್ಯಾಪ್ತಿ ಸ್ಫುಟವಾಗಿ

ತಿಳಿಯುವಂತೆ ಹಾಗೂ ಒಂದು ನಿಘಂಟಿಮುವನ್ನು ಇನ್ನೊಂದು ನಿಘಂಟಿಮುದಿಂದ ಸುಲಭವಾಗಿ ಬೇರ್ಪಡಿಸಲು ಸಹಾಯುವಾಗುವಂತೆ ನಿಘಂಟಿಮುದ ವ್ಯಾಖ್ಯೆಯನ್ನು ರೂಪಿಸಬೇಕು. ಅಂದರೆ, ದ್ವಿಭಾಷಿಕ ಶಬ್ದಕೋಶದಲ್ಲಿ ಆ ಸ್ಥಾನವನ್ನು ಉದ್ದಿಷ್ಟ ಭಾಷೆಯ ಸಮಾನಾರ್ಥಕ ಪಡೆದುಕೊಳ್ಳುತ್ತದೆ.

(ರ) **ಸಮಾನಾರ್ಥಕಗಳು :** ಆಕರಭಾಷೆಯ ನೀರು ಎಂಬ ರೂಪಕ್ಕೆ ಇಂಗ್ಲೀಷಿನಲ್ಲಿ 'Water' ಎನ್ನಬೇಕೇ ಹೊರತು $H_2O$ ಎಂದು ಹೇಳುವುದಿಲ್ಲ. ಯಾಕೆಂದರೆ, ಅದು ಶ್ರೀಸಾಮಾನ್ಯನಿಗೆ ನೇರವಾಗಿ ಅರ್ಥವಾಗಲಾರದು. ಒಂದೇ ನಿಘಂಟಿಮುಕ್ಕೆ ವಿಭಿನ್ನ ಅರ್ಥಗಳಿರುವಾಗ, ವಿಭಿನ್ನ ಅರ್ಥಗಳನ್ನು ಸೋದಾಹರಣವಾಗಿ ಪ್ರಯೋಗಗಳ ಮೂಲಕ ಉದ್ಧರಣೆಗಳೊಂದಿಗೆ ಸ್ಪಷ್ಟೀಕರಿಸಬೇಕು :

ನೀಗು : 'to be got rid of' ಸಂಕಟಗಳನ್ನು ನೀಗುವುದು
(B. 3.70)
'to leave' ಅಸು ನೀಗಿಸು ಅಸುರನ ತನುವ (Bh. 1, 10, 38)
ಇತ್ಯಾದಿಯಾಗಿ.

ಒಂದು ನಿಘಂಟಿಮುಕ್ಕೆ ಹಲವು ಸಮಾನಾರ್ಥಕಗಳು ಇದ್ದಲ್ಲಿ ಅವುಗಳಲ್ಲಿ ಹೆಚ್ಚು ಪ್ರಸಾರ (Distribution) ಉಳ್ಳವುಗಳನ್ನು ಮೊದಲು ಆ ಬಳಿಕ ಉಳಿದವುಗಳನ್ನು ಅನುಕ್ರಮವಾಗಿ ಸೂಚಿಸಬೇಕು :

ಕಾಯ್ : 'fruit in a yet unripe, hard, but pretty full
grown state; any nut;
any head or capsule of plants;
a pod;
a piece used at the pagade play.

ಭಾಷೆ ಭಾಷೆಗಳಲ್ಲಿ ವ್ಯತ್ಯಾಸಗಳಿರುವುದರಿಂದ ದ್ವಿಭಾಷಿಕ ಶಬ್ದಕೋಶಗಳಲ್ಲಿ ಆಕರಭಾಷೆಯ ನಿಘಂಟಿಮುಗಳಿಗೆ ತಕ್ಕುದಾದ ಸಮನಾರ್ಥಕಗಳನ್ನು ಉದ್ದಿಷ್ಟ ಭಾಷೆಯಲ್ಲಿ ಹೊಂದಿಸಿ ನಿರೂಪಿಸುವುದು ಸುಲಭಸಾಧ್ಯ ಕೆಲಸವಲ್ಲ. ಅದರಲ್ಲಿಯೂ ಸಾಂಸ್ಕೃತಿಕ ಪದಗಳಿಗೆ ಸಮಾನಾರ್ಥಕಗಳನ್ನು ಹುಡುಕುವುದು ಬಹು ಕಠಿಣ. ಇಂತಹ ಸಂದರ್ಭಗಳಲ್ಲಿ ಸಮಾನಾರ್ಥಕದ ಬದಲು ಅರ್ಥವಿವರವನ್ನು ನೀಡಬೇಕಾಗುತ್ತದೆ.

ದೋಸೆ: 'A holed, i.e. spongy, cake of rice-flour, black-gram, etc., baked on a potsherd or in a pan'.

ಚಕ್ಕುಲಿ: 'A snack prepared out of (rice) dough in a circular manner'.

ಪಾನಕ : 'A beverage made of jaggery, sugar etc. and water, and drunk as sherbet'.

ತಾಲಿ (ತಾಳಿ): 'A small round plate of gold worn at the neck, as a marriage badge answering to the marriage-ring'.

ಕುಂಕುಮ : 'A kind of fragrant cosmetic; crimsoned saffron-powder applied by women to their foreheads as a sign of their husband being alive'.

ನಿಘಂಟಿಮಗಳಿಗೆ ಸಮಾನಾರ್ಥಕಗಳೂ ಇಲ್ಲ, ವಿವರಣೆ ಕೊಡುವುದೂ ಸಾಧ್ಯವಿಲ್ಲ ಎಂದಾಗ ಅವುಗಳ ಭಾಷಿಕ ಕ್ರಿಯೆಯನ್ನು ಸೂಚಿಸಬೇಕು :

ಗುಂ : 'An imitative sound of buzzing in the ears'.

ಗುಂಯಿ: 'An imitative sound; The sound emitted by some insects especially by the mosquito and gungi (C; B 2, 44).

ಅಯ್ಯೋ : 'An interjection, expressing-grief; alas! astonishment : ah! aha!.
compassion: ah! alas!
ಅಯ್ಯೋ, ಅಕ್ಕಟಾ, ಇನ್ನ್ಹೆಂಗೆ ಕೇಡು ಆಯ್ತು? (Smd. 69)

(ಖ) ವಿವರಗಳು :

ಆಯ್ಕೆ ಮಾಡಿದ ನಿಘಂಟಿಮ ಗ್ರಾಮ್ಯವೆ, ಶಿಷ್ಟವೆ? ಪ್ರಾದೇಶಿಕ ರೂಪವೆ? ಪ್ರತ್ಯೇಕ ಸಮಾಜವರ್ಗಕ್ಕೆ ಸೇರಿದ್ದೆ? ಹಳಗನ್ನಡದ್ದೆ? ನಡುಗನ್ನಡದ್ದೆ? ಹೊಸಗನ್ನಡದ್ದೆ ಪ್ರಾಕ್ ರೂಪವೆ? ಅದು ಯಾವ ಶಿಸ್ತಿಗೆ ಸೇರಿದ ತಾಂತ್ರಿಕ ಪದ? ಯಾವ ಮೂಲದಿಂದ ಎಂಬಿತ್ಯಾದಿಗಳೇ ನಿಘಂಟಿಮದ ವಿವರಗಳು.

ಈ ನಿಘಂಟಿಮ ವಿವರಗಳನ್ನು ಹೆಚ್ಚಾಗಿ ಸಂಕ್ಷೇಪಕಗಳ ಮೂಲಕ ನಿಘಂಟಿಮದ ಪಕ್ಕದಲ್ಲಿಯೇ ಸೂಚಿಸುತ್ತಾರೆ.

| | |
|---|---|
| OK | Old Kannada |
| BO | Botany |
| Br | Brahmin |
| Col | Colloquial |

| | |
|---|---|
| Com | Common |
| DK | Dharwar Kannada |
| MK | Modern Kannada |
| Z | Zoology |
| * | Proto-from |
| < | Derived from |

**(ಘ) ಪ್ರಯೋಗಗಳು :**

ನಿಘಂಟಿಮಗಳ ಬಳಕೆಯನ್ನು ಆಧರಿಸಿ ಪ್ರಯೋಗಗಳನ್ನು ಕೊಟ್ಟರೆ ಅವುಗಳನ್ನು ಬಳಸುವ ಸಂದರ್ಭ ಹಾಗೂ ಅರ್ಥ ಮನದಟ್ಟಾಗುತ್ತದೆ :

ಓಗರ : 'Boiled rice' ಓಗರದ ಮೇಲಣ ನಿಡಿ. 'ಓಗರದ ಗಂಜಿ' ಮೇಲೋಗರ.

ನಿಡಿ : 'Seum, froth, whey etc'. ಮೊಸರ ಮೇಲಣ ನಿಡಿ. ಮದ್ಯದ ಮೇಲಣ ನಿಡಿ.

ನಿಶ್ಚಿನ್ತೆ : 'Freedom from anxiety or solicitude, ease' ನಿತ್ಯ ದರಿದ್ರನಿಗೆ ನಿಶ್ಚಿನ್ತೆ (Prov.).

**(3) ಅಕಾರಾದಿ ಸಂಯೋಜನೆ :**

ದ್ವಿಭಾಷಿಕ ಶಬ್ದಕೋಶ ರಚನೆಯಲ್ಲಿ ಆಕರ ಭಾಷೆಯಿಂದ (ಉದಾಹರಣಾರ್ಥವಾಗಿ, ಕನ್ನಡದಿಂದ) ನಿಘಂಟಿಮಗಳನ್ನು ಆಯ್ದು ಅವುಗಳ ರೂಪ ಮತ್ತು ಉದ್ದಿಷ್ಟ ಭಾಷೆಯ ಇತರ ವಿವರಗಳನ್ನು ಕೊಟ್ಟ ಬಳಿಕ ಆ ನಿಘಂಟಿಮಗಳನ್ನು ಅಕಾರಾದಿಯಲ್ಲಿ ಸಂಯೋಜಿಸಿದಾಗ ದ್ವಿಭಾಷಿಕ ನಿಘಂಟು ನಿರ್ಮಾಣಗೊಳ್ಳುತ್ತದೆ.

### 4.0 ಕಿಟೆಲ್ ಕೋಶದ ಪದ್ಧತಿ

ಕಿಟೆಲ್ ತನ್ನ ಕೋಶದಲ್ಲಿ ಅನುಸರಿಸಿದ ಪದ್ಧತಿಯನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದು :

4.1 ಕಿಟೆಲ್ ತನ್ನ ಕ್ಷೇತ್ರಕಾರ್ಯಕ್ಕಾಗಿ 18 ಹಳಗನ್ನಡ ಸಾಹಿತ್ಯ ಕೃತಿಗಳನ್ನೂ, 18 ನಡುಗನ್ನಡ ಸಾಹಿತ್ಯ ಕೃತಿಗಳನ್ನೂ, 4 ಹೊಸಗನ್ನಡ ಸಾಹಿತ್ಯ ಕೃತಿಗಳನ್ನೂ, 5 ದ್ರಾವಿಡ ಇಂಗ್ಲಿಷ್ ಶಬ್ದ ಕೋಶಗಳನ್ನೂ, 4 ಸಂಸ್ಕೃತ ಶಬ್ದ ಕೋಶಗಳನ್ನೂ, 1 ಮರಾಠಿ ಶಬ್ದ ಕೋಶವನ್ನೂ ದತ್ತ ಸಂಗ್ರಹಕ್ಕಾಗಿ ಹಾಗೂ ಪ್ರಯೋಗಗಳಿಗಾಗಿ ಬಳಸಿಕೊಂಡಿದ್ದಾನೆ (ಭಟ್ಟ, 84). ಅಷ್ಟೇ ಅಲ್ಲದೆ ಸಂಪರ್ಕ ವಿಧಾನ

Contact method) ವನ್ನು ಅಳವಡಿಸಿಕೊಂಡು ನಿರೂಪಕರನ್ನು ಸಂಪರ್ಕಿಸಿ ಆಡು ನುಡಿಗಳನ್ನೂ, ನುಡಿಗಟ್ಟುಗಳನ್ನೂ, ಗ್ರಾಮ್ಯ ಹಾಗೂ ಪ್ರಾದೇಶಿಕ ರೂಪಗಳನ್ನೂ ಸಂಗ್ರಹಿಸಿದ್ದಾನೆ (ಹಾವನೂರ 125, ಧಾರವಾಡಕರ 603, ಬಸವಾರಾಧ್ಯ 93) ಹೀಗೆ ಮಾರ್ಗ ಸಾಹಿತ್ಯದೊಡನೆ ಪಂಡಿತರ ತುಳಿತಕ್ಕೂ ಉಪೇಕ್ಷೆಗೂ ಒಳಪಟ್ಟ ಜನಪದ (ದೇಶೀ) ಸಾಹಿತ್ಯಕ್ಕೂ ತನ್ನ ಶಬ್ದಕೋಶದಲ್ಲಿ ಸಮಾನ ಸ್ಥಾನಮಾನ ಕೊಟ್ಟು ನಿಘಂಟಿಮುಗಳ ಆಯ್ಕೆಯಲ್ಲಿ ಹಿಂದಿನವರ ಮಡಿವಂತಿಕೆಯನ್ನು ಹಿಮ್ಮೆಟ್ಟಿ, ತನ್ನ ಹೃದಯವಂತಿಕೆಯಿಂದ ಮುಂದಿನವರಿಗೆ ಸನ್ಮಾರ್ಗ ತೋರಿಸಿದ ಕೀರ್ತಿ ಪ್ರಪ್ರಥಮವಾಗಿ ಕಿಟೆಲರಿಗೆ ಸಲ್ಲುತ್ತದೆ.

4.2 ನಿಘಂಟಿಮುಗಳನ್ನು ನಿಯಮಿತ ರೂಪದಲ್ಲಿ ಸಮೂದಿಸಿದ ಬಳಿಕ ಅದರ ಉಚ್ಚಾರವನ್ನು ಪರಿಷ್ಕೃತಗೊಳಿಸಿದ ರೋಮನ್ ಲಿಪಿಯ ಮೂಲಕ ಸೂಚಿಸಿ, ಖಚಿತಗೊಳಿಸಿದ್ದಾನೆ. ಅವುಗಳ ಪರ್ಯಾಯ ಹಾಗೂ ವಿಕಾರ ರೂಪಗಳನ್ನು ತಿಳಿಸಿದ್ದಾನೆ.

4.3 ಪ್ರಧಾನ ನಿಘಂಟಿಮುವನ್ನು ಸೂಚಿಸುವಲ್ಲಿ ದೇಶ್ಯ ರೂಪಗಳನ್ನು ದಪ್ಪಾಕ್ಷರ (12 ಪಾಯಿಂಟು)ಗಳಲ್ಲಿ, ಇತರ ರೂಪಗಳನ್ನು 10 ಪಾಯಿಂಟುಗಳ ಸಾಮಾನ್ಯಾಕ್ಷರಗಳಲ್ಲಿ ಸೂಚಿಸಿ ಪರ್ಯಾರ್ಯಗಳನ್ನು ಪಕ್ಕದಲ್ಲಿಯೇ ಕೊಟ್ಟಿದ್ದಾನೆ. ಹೀಗೆ ಸಂಸ್ಕೃತಾದಿ ಅನ್ಯಭಾಷಾರೂಪಗಳಿಗಿಂತ ಕನ್ನಡ ರೂಪಗಳಿಗೇ ಹೆಚ್ಚಿನ ಸ್ಥಾನಮಾನ ನೀಡಿದ್ದಾನೆಂಬುದು ಗಮನಾರ್ಹ ವಿಷಯ. ನಿಘಂಟಿಮುಗಳ ದೇಶ್ಯ, ಸಂಸ್ಕೃತ, ತದ್ಭವ ಮೊದಲಾದ ವಿವರಗಳನ್ನು ಕೊಟ್ಟು ಸಮಾಸಗಳನ್ನೂ ಸಹಾ ರಚಿಸಿದ್ದಾನೆ. ಸೂಕ್ತವಾದ ಪ್ರಯೋಗಗಳನ್ನು, ಅತಿವ್ಯಾಪ್ತಿ ದೋಷ ಬಾರದ ಹಾಗೆ ಸಾಹಿತ್ಯ ಗ್ರಂಥಗಳಿಂದ ಆಕರ ಸಹಿತವಾಗಿ ಕೊಟ್ಟು ಪ್ರಾದೇಶಿಕ ರೂಪ, ಗಾದೆ ಮಾತು ಇತ್ಯಾದಿಗಳನ್ನೂ ಸಮರ್ಪಕವಾಗಿ ಸೂಚಿಸಿದ್ದಾನೆ. ಈ ಕಾರಣಗಳಿಂದ ಕಿಟೆಲ್ ಕೋಶವನ್ನು ಸರ್ವ ಸಂಗ್ರಾಹಕ ಶಬ್ದಕೋಶವೆನ್ನಬೇಕಾಗುತ್ತದೆ. ಕನ್ನಡ ನಿಘಂಟಿಮುಗಳ ಅರ್ಥ ವಿವರಗಳನ್ನು ಇಂಗ್ಲಿಷಿನಲ್ಲಿ ಕೊಟ್ಟಿರುವುದರಿಂದ ಪಾರಿಭಾಷಿಕವಾಗಿ ಅದನ್ನು "ದ್ವಿಭಾಷಿಕ ಸರ್ವ ಸಂಗ್ರಾಹಕ ವಿವರಣಾತ್ಮಕ ಶಬ್ದಕೋಶ"ವೆಂದು ಕರೆಯಬೇಕಾಗುತ್ತದೆ.

4.4 ಸರ್ವ ಸಂಗ್ರಾಹಕ ಕೋಶದ ಸ್ವರೂಪಕ್ಕನುಗುಣವಾಗಿ ಕನ್ನಡ ನಿಘಂಟಿಮುಗಳ ರೂಪವನ್ನು ರಚಿಸುವಲ್ಲಿ ಅವುಗಳ ಜ್ಞಾತಿಪದಗಳನ್ನೂ ಅವಶ್ಯಕಂಡಲ್ಲಿ ಪದವ್ಯುತ್ಪತ್ತಿಗಳನ್ನೂ (Etymology) ಸೂಚಿಸಿ ಕೋಶದ ಉಪಯುಕ್ತತೆಯನ್ನು ಕಿಟೆಲ್ ಹೆಚ್ಚಿಸಿದ್ದಾನೆ.

4.5 ಪ್ರಸ್ತುತ ಕೋಶದಲ್ಲಿ ಸಂಕ್ಷೇಪ ಸೂಚಿ, ಸಾಹಿತ್ಯ ಸೂಚಿ, ಉಚ್ಚಾರ ವಿವರ ಮೊದಲಾದ ಮಾಹಿತಿಗಳೊಡನೆ ಸಹಕರಿಸಿದ ವಿವಿಧ ಸಮಾಜಗಳ ಪ್ರಮುಖ ದೇಶಿ ಹಾಗೂ ವಿದೇಶಿ ವಿದ್ವಾಂಸರ ಹೆಸರುಗಳನ್ನು, ಪ್ರವೇಶಿಕೆಯಲ್ಲಿ ಉಲ್ಲೇಖಿಸಿದ್ದಾನೆ :

ದೇಶಿ ವಿದ್ವಾಂಸರು

1) ಲಿಂಗಾಯತ ಅಯ್ಯ — ವಸ್ತ್ರದ ಶಿವಲಿಂಗಪ್ಪ (ಹುಬ್ಬಳ್ಳಿ)
2) ಎಂ. ಸಿ. ಶ್ರೀನಿವಾಸ ಆಚಾರಿ (ಬ್ರಾಹ್ಮಣ—ಮೈಸೂರು)

ವಿದೇಶಿ ವಿದ್ವಾಂಸರು : ರೆ. ಎಫ್. ಸೀಗ್ಲರ್ (Rev. F. Zigler)

ಹರಸಿದವರು : 1) ಡಾ. ಎಚ್. ಮೋಗ್ಲಿಂಗ್ (Dr. H. Moegling)
2) ಡಾ. ಎ. ಸಿ. ಬರ್ನೆಲ್ (Dr. A. C. Burnell)
3) ಡಾ. ಆರ್. ರೋಸ್ಟ್ (Dr. R. Rost)
4) ಶ್ರೀ ಬಿ. ಸಿ. ರೈಸ್ (Mr. B. C. Rice)

### 5.0 ಕಿಟೆಲ್ ಕೋಶದ ಮೌಲ್ಯಮಾಪನ

ನಿಘಂಟು ರಚನಾ ವಿಜ್ಞಾನದ ಚೌಕಟ್ಟಿನಲ್ಲಿ ಕಿಟೆಲ್‌ಕೋಶವನ್ನು ಪರಾಂಬರಿಸಿ ನೋಡಿದಾಗ ಮಾತ್ರ ಅದರ ಮೌಲ್ಯಮಾಪನವನ್ನು ವೈಜ್ಞಾನಿಕವಾಗಿ ನಿರ್ಧರಿಸಲು ಸಾಧ್ಯವಾಗುತ್ತದೆ. ಕಿಟೆಲ್ ಕೋಶದಲ್ಲಿ ಈಗಾಗಲೇ ವಿವರಿಸಲಾದ ನಿಘಂಟುರಚನಾ ವೈಜ್ಞಾನಿಕ ಪದ್ಧತಿ ಅಳವಡಿಸಲಾಗಿದೆಯಾದರೆ ಅದನ್ನು ವೈಜ್ಞಾನಿಕ ಶಬ್ದಕೋಶ ವೆಂದು ಕರೆಯಬೇಕು.

ಈಗಾಗಲೇ ನಾವು ಗಮನಿಸಿದಂತೆ (ನೋಡಿ 4.0) ಕಿಟೆಲ್ ತನ್ನ ಕನ್ನಡ-ಇಂಗ್ಲಿಷ್ ಕೋಶ (1894)ದಲ್ಲಿ ಬಹುಮಟ್ಟಿಗೆ ನಿಘಂಟುರಚನಾ ವೈಜ್ಞಾನಿಕ ಪದ್ಧತಿ ಯನ್ನು (ನೋಡಿ 3.0) ಅಳವಡಿಸಿಕೊಂಡಿದ್ದಾನೆ.

ಈ ಕಾರಣದಿಂದಾಗಿ ಕಿಟೆಲ್‌ಕೋಶ ಒಂದು ವೈಜ್ಞಾನಿಕ ಶಬ್ದಕೋಶ ಎಂಬುದರಲ್ಲಿ ಎರಡು ಮಾತಿಲ್ಲ.

ಆಧುನಿಕ ನಿಘಂಟುರಚನಾ ವಿಜ್ಞಾನ ಹುಟ್ಟುವ ಬಹು ವರ್ಷಗಳ ಹಿಂದೆಯೇ ಅದರ ಪ್ರಾಕ್- ರೂಪ ಎನ್ನುವ ರೀತಿಯಲ್ಲಿ ಕ್ಷೇತ್ರಕಾರ್ಯ ಆಧರಿತ ಶಬ್ದಕೋಶ ರಚನಾ ಪದ್ಧತಿಯನ್ನು ರೂಪಿಸಿ ಸರ್ವಸಂಗ್ರಾಹಕ ಕನ್ನಡ-ಇಂಗ್ಲಿಷ್ ಪದಕೋಶವನ್ನು ರಚಿಸಿ ಕರ್ನಾಟಕದಾದ್ಯಂತ ಪ್ರಾತಃಸ್ಮರಣೀಯನಾಗಿದ್ದಾನೆ.

ಒಟ್ಟಿನಲ್ಲಿ, ಕಿಟೆಲ್ ಕೋಶ ಕೇವಲ ಒಂದು ಕನ್ನಡ-ಇಂಗ್ಲಿಷ್ ಶಬ್ದಕೋಶ ಮಾತ್ರವಾಗಿರದೆ ಅದು ಕನ್ನಡದ ಸಾಂಸ್ಕೃತಿಕ ಕೋಶವೂ ಆಗಿದೆ. ಅದು ವಿವರಣಾತ್ಮಕ ಭಾಷಾವೈಜ್ಞಾನಿಕ ಅಧ್ಯಯನಕ್ಕೆ, ತೌಲನಿಕ ದ್ರಾವಿಡ ಭಾಷಾವೈಜ್ಞಾನಿಕ ಅಧ್ಯಯನಕ್ಕೆ ಅಂತೆಯೇ ಕನ್ನಡ ಜಾನಪದ ವೈಜ್ಞಾನಿಕ ಅಧ್ಯಯನಕ್ಕೆ ಸಾಕಷ್ಟು ಮಹತ್ವವಾದ ಸಾಮಗ್ರಿಗಳನ್ನು ಕೊಡುವುದರಿಂದ ವಿದ್ವಾಂಸರಿಗೆ ಅದೊಂದು ಅತ್ಯುತ್ತಮ ಆಕರ

ಗ್ರಂಥವೂ ಆಗಿದೆ. ಈ ಕಾರಣಗಳಿಂದಾಗಿ ಕಿಟೆಲ್ ಕೋಶ ಇಂದಿಗೂ ಕನ್ನಡದ ನಿಷ್ಕೃಷ್ಟವಾದ ಪ್ರಮಾಣ ಭೂತವಾದ ಸರ್ವಸಂಗ್ರಾಹಕ ಶಬ್ದಕೋಶವಾಗಿ ಅದ್ವಿತೀಯ ಸ್ಥಾನದಲ್ಲಿದೆಂದು ಖಚಿತವಾಗಿ ಹೇಳಬೇಕಾಗುತ್ತದೆ.

## 6.0 ಅನುಬಂಧಗಳು

### 1) ಕಿಟೆಲ್ ಕೋಶದ ಮಾದರಿ ಪತ್ಯಗಳು

1. ಅಲರ್ alar ·1· = ಅರಲ್₁ (Šmd.41), etc. To spread, to become distended, to open, to blossom, to bloom ; to rejoice (ವಿಕಸನ Šmd· Dh.; Šm.23. (ಉನ್ಮೀಲಿತ, ಸ್ಮಿತ, ಉನ್ನಿದ) etc.Hlă).

ಕಮ್ಪು ಅಲರ್ದುದು (Šmd·55). ಅಲರ್ದ ಅಮ್ಭೋರುಹ ಷಣ್ಡಮ್ ಉಳ್ಳ. ಅಲರ್ದ ಚೆನ್ನೆಯ್ದಿಲ್ಗೊಳಂ (216). ನೀಳ್ದು ಅಲರ್ದ ಬಾಲ (ಲಲಾಮ Mr· 498) ಅಲರ್ದ ಬಾಲ (ಪ್ರವಾಲ Mr· 505). See Bp. 2,51: 4,26; 12.38, 28,56; 32, 12.27; 33,6; 45,10; 47,65; 49,19; 50.2; 60,32: Ršv· 6.2; 10, after 29; 12, 23.

2 ಎಲ್ಲೆ elle. A limit, a boundary (My.; Te; M. ಎದೆ, ಎಲ್ಲೆ : T. ಎಲ್ಲೈ, Tu. ಎಲ್ಲ್ಯ, little· small, short). Cf. Sk. ವೇಲಾ?— ಎಲ್ಲೆಕಟ್ಟು — ಎಲ್ಲೆ (My.)· ಎಲ್ಲೆಕಟ್ಟಿನ ಹದ್ದು. (ಸೀಮೆ Si- 113) ಎಲ್ಲೆಕಟ್ಟಿನ ಓಪಾದಿಯಾಗಿ (100).— ಎಲ್ಲೆಕಲ್ಲು. A boundary-stone (My.).

3. ಕೀಲು kîlu = ಕೀಲ್, etc. A pin, a peg, a tenon, a joint, etc.) (ಮಯೂಖ Mn ೯೧; ಕಾಷ್ಠ 101; ಸ್ಥಾಣು Hîa ; C). 2, a device, a contrivance (S. Mhr.), a secret reason, a secret, the key to. ದರ್ಮಧಾರೆಯ ಕೀಲನ್ ಅರಯ್ದು (Bp· 28.34)· ಶೃಂಗಾರಂಗಳ ಒಪ್ಪದ ಕೀಲು (28, 46).ಮಡದಿಯರ ಮನಸುಗಳ ಕೀಲುಗಳ ಬಲ್ಲವನೆ (40,32) ಲೋಲಲೋಚನೆ ಶೂಲಭೃತನು ತನ್ನನೆ ಅಱಿಯದ ಕೀಲನ್ ಅಱಿದು (40. 85) ಕೀಲು ತೊಲಂಗಿ ಡೊಂಕುಗಳ ಎಡೆಗಡೆಗೆ ನೆಲೆಗೊಣ್ಡ ಕೆಯ್ ಕಾಲ ಅಂಗುಳಂಗಳ ಸನ್ದಿಗಳ (ಹೆಣಂ, 46, 58). ಕೀಲೀ ಸಣ್ಣದಾದರೂ ಗಾಲೀ ನಡೆಸುತ್ತದೆ (Prov. See ಕಡಗೀಲು, — ಕೀಲ ಬೊಮ್ಬೆ. A doll with movable limbs (Bp·14, 4: My). ಕೀಲು ಕೂಟ A kind of jointed hinge (My·).

## (2) ಸಂಕೇತ ಸೂಚಿ :

B. Bombay, the Department of public Instruction. kanarese Books. 1 (1882), 2 (1882), 3 (1883). One of the numbers refers to the book, the other are to the page.

Bh. Kumâra Vyâsa's Bhârata. Bangalore, Vicâradarpaṇa Press, 1876.

Bp. Basava Purâṇa. Bibliotheca Carnâṭka, Mangalore, 1850.

C. Common.

Cf. Confer (Compare).

Dh. The Dhâtuprakaraṇa of Sabdamaṇidarpaṇa.

etc. et cetera (and other things)

Hla. Ancient Kannada Commentary on Halâyudha's Abhidhânaratnamâlâ (Manuscript).

Mr. Maṅgarâja's nighaṇṭu (Manscript). For the sake of convenience the verses of whole Ms. have been counted successively (without regard to the various divisions), and are quoted in that manner. Four MSS. have been consulted.

My. Mysore.

P.p. Past participle.

Prv. Proverb

Rsv. Râjasekharavilâse (Manuscript ; Bangalore edition, Krishṇarâja Vilâsa Press, 1866).

Sm. Toṭada Ârya's Sabdamanjâri (Manuscript).

Smd. Sabdamaṇidarpaṇa. The Arabic numbers refer to the pages of the edition printed at the Basel Mission Press, Mangalore, 1872.

Si Siddhânti Subrahmanya Šâstri's new interpretation of the Amarakôša, Bangalore, Vičâradarpaṇa Press, 1872. The numbers denote the pages.

Sk. Saṁskṛta

S.Mhr. South Marâṭha.

T. Tamiḷ (A Dictionary of the Tamil and English Languages, by the Rev. J. P. Rottler, D.Ph., Madras, 1834).

Te. Telugu (Messers A. D. Campbell and C. P. Brown's Telugu–English Dictionares).

Tu. Tuḷu (Teḷu-English Dictionary, by Rev. A. Manner, Basel Mission Press, Mangalore, 1886).

= equal (in meaning).

**ಅಕ್ಷರ ಸೂಚಿ**

ಉಪಾಧ್ಯಾಯ (ಡಾ.) ಯು.ಪಿ. (ಪ್ರ.ಸಂ.) 1988. ತುಳು ನಿಘಂಟು, ಸಂಪುಟ ಒಂದು (ತುಳು–ಕನ್ನಡ–ಇಂಗ್ಲಿಷ್ ಶಬ್ದಕೋಶ). ಉಡುಪಿ : ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಎಂ.ಜಿ.ಎಂ. ಕಾಲೇಜು.

ಧಾರವಾಡಕರ. ರಾ.ಯ. 1975. ಹೊಸಗನ್ನಡ ಸಾಹಿತ್ಯದ ಉದಯಕಾಲ. ಧಾರವಾಡ : ಕರ್ನಾಟಕ ವಿಶ್ವವಿದ್ಯಾಲಯ.

ಪೈ, ಮಂಜೇಶ್ವರ ಗೋವಿಂದ 1972. "ಕಿಟೆಲ್ ಫರ್ಡಿನೆಂಡ್" ಕನ್ನಡ ವಿಶ್ವಕೋಶ, ಸಂಪುಟ ನಾಲ್ಕು. ಹಾ.ಮಾ. ನಾಯಕ್ (ಪ್ರ.ಸಂ.). ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

ಬಸವಾರಾಧ್ಯ ಎಸ್. 1971. "ನಿಘಂಟು ಕ್ಷೇತ್ರಕ್ಕೆ ಕಿಟೆಲ್ಲರ ಕಾಣಿಕೆ", ಕನ್ನಡಕ್ಕೆ ಕಿಟೆಲ್ಲರ ಕೊಡುಗೆ. ಆರ್. ಸಿ. ಹಿರೇಮಠ್ (ಪ್ರ.ಸಂ.), ಧಾರವಾಡ : ಕಿಟೆಲ್ ಕಾಲೇಜು.

ಭಟ್ಟ, ಎಂ. ಮರಿಯಪ್ಪ 1971. "ಕಿಟೆಲ್ ಕೋಶದ ಮರುಸಂಪಾದನೆ", ಅದೇ.

ಮಾಡ್ತ, ವಿಲ್ಯಂ. "ನಿಘಂಟು ವಿಜ್ಞಾನ". ಸಾಧನೆ (1989 : 18–i–2), ಬೆಂಗಳೂರು : ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಪು. 63-69.

ಮಾಡ್ತ. ವಿಲ್ಯಂ "ನಿಘಂಟು ವಿಜ್ಞಾನ," ಸಾಧನೆ (1989 : 18-3), ಅಲ್ಲಿಯೇ, ಪು. 1–22.

ಮಾಡ್ರ, ವಿಲ್ಯಂ ಮತ್ತು ರಘು ಕುಲಕರ್ಣಿ. ನಿಘಂಟು ರಚನಾ ವಿಜ್ಞಾನ (ಅಚ್ಚಿನಲ್ಲಿದೆ). ಹಂಪಿ. ಕನ್ನಡ ವಿಶ್ವವಿದ್ಯಾಲಯ.

ಹಾವನೂರ್. ಶ್ರೀನಿವಾಸ 1974. ಹೊಸಗನ್ನಡ ಅರುಣೋದಯ. ಮೈಸೂರು : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

ಹಿರೇಮಠ. ಆರ್. ಸಿ. (ಪ್ರ.ಸಂ.) 1971. ಕನ್ನಡಕ್ಕೆ ಕಿಟೆಲ್ಲರ ಕೊಡುಗೆ. ಧಾರವಾಡ : ಕಿಟೆಲ್ ಕಾಲೇಜು.

DOROSZEUSKI, Witold 1973. *Elements of Lexicology and Semiotics.* The Hague. Paris : Mouton.

KITTEL, (Rev.) F. 1894 *A Kannada–English Dictionary,* Mangalore : Basel Mission Book and Tract Depository.

LEHRER, Adrienne 1974. *Semantic Field and Lexical Structure* (North-Holland Series), New York : American Elsvier Publishing Co., Inc.

LONGYEAR, Christopher R. 1971. *Linguistically Determined Categories of Meanings.* The Hague. Paris : Mouton.

ZGUSTA, Ladislav 1971. *Manual of Lexicography.* The Hague. Paris : Mouton.

## ಮಂಥನ

### ಮುಮ್ಮಡಿ ತಮ್ಮ ವಿರಚಿತ "ನಂದಿಗಿರಿ ಮಹಿಮೆ"-ಒಂದು ಟಿಪ್ಪಣಿ

ರಾ. ನರಸಿಂಹಾಚಾರ್ಯರು 'ಕರ್ಣಾಟಕ ಕವಿಚರಿತೆ' ದ್ವಿತೀಯ ಸಂಪುಟ (1919) ಪುಟ 451 ರಲ್ಲಿ ಮುಮ್ಮಡಿ ತಮ್ಮನ ಕೃತಿಗಳ ಬಗೆಗೆ ತಿಳಿಸುತ್ತ ಆತ 'ಕನ್ನಡದಲ್ಲಿ ಯಕ್ಷಗಾನ ರೂಪದಿಂದ ಸಂ...'ನ್ನು ಬರೆದಿರುವುದಾಗಿ ತಿಳಿಸಿದ್ದಾರೆ. ಅವರು ಪರಿಶೀಲಿಸಿದ ಪ್ರತಿಯಲ್ಲಿ ಕೃತಿಯ ಹೆಸರಿನ ಭಾಗ ತ್ರುಟಿತವಾದ ಅಂಶ ಅಡಿಟಿಪ್ಪಣಿಯಲ್ಲಿದೆ.

ಚಿತ್ರದುರ್ಗದ ಬೃಹನ್ಮಠದ ಸಂಗ್ರಹದಲ್ಲಿನ ಕ್ರಮಾಂಕ 44ರಲ್ಲಿ ಮುಮ್ಮಡಿ ತಮ್ಮನ 'ಶಂಕರ ಸಂಹಿತೆ'ಯ ಓಲೆ ಪ್ರತಿ ಪೂರ್ಣವಾಗಿ ಲಭ್ಯವಿದೆ. ಇಲ್ಲಿ ಕೃತಿಯ ಹೆಸರಿನ ಭಾಗ ಪೂರ್ಣ ರೂಪದಲ್ಲಿದ್ದು ಇಂತಿದೆ '...ಕನ್ನಡದೆ ಯಕ್ಷಗಾನದೊಳು ನಂದಿಗಿರಿಮಹಿಮೆಯುಲಿದ್ಯೆ'. (1-28)

ಇದರಿಂದ ಮುಮ್ಮಡಿ ತಮ್ಮನು ರಚಿಸಿದ ಯಕ್ಷಗಾನ 'ನಂದಿಗಿರಿ ಮಹಿಮೆ' ಎಂಬ ಸಂಗತಿ ತಿಳಿಯುತ್ತದೆ. ಅಲ್ಲದೆ ಹದಿನೇಳನೆಯ ಶತಮಾನದ ಉತ್ತರಾರ್ಧದ ಕಾಲದಲ್ಲಿ ರಚಿತವಾದ ಈ ಕೃತಿ ಐತಿಹಾಸಿಕ ಮಹತ್ತ್ವಪೂರ್ಣ ದಾಖಲೆಯಾಗಿದೆ ಯಕ್ಷಗಾನ ಪ್ರಕಾರದ ದೃಷ್ಟಿಯಿಂದ.

---

'ಶಂಕರ ಸಹಿತೆ'ಯ ಓಲೆ ಪ್ರತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿಯಿತ್ತ ಚಿತ್ರದುರ್ಗದ ಬೃಹನ್ಮಠದ ಶೂನ್ಯ ಪೀಠಾಧ್ಯಕ್ಷರಾದ ಶ್ರೀ ಮನ್ನಿರಂಜನ ಜಗದ್ಗುರು ಶ್ರೀ ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳಿಗೆ ನನ್ನ ವಂದನೆಗಳು.

ಎಸ್. ಶಿವಣ್ಣ

### ಪಂಪಭಾರತದ ಒಂದು ಪಾಠ ವಿಚಾರ : ಒಂದು ಪ್ರತಿಕ್ರಿಯೆ

ಸಾಧನೆ : ಸಂಪುಟ 19. ಸಂಚಿಕೆ 3-4 ರಲ್ಲಿ ಪ್ರಕಟವಾದ 'ಪಾಠ ವಿಚಾರ'ವಾಗಿ ಬರೆದ ಸಿ.ಪಿ.ಕೆ. ಯವರ ಲೇಖನದಲ್ಲಿ, (ವಿಕ್ರಮಾರ್ಜುನ ವಿಜಯದ ಆ 10 : 46ರ ಪದ್ಯದ ನಾಲ್ಕನೆ ಪಾದದಲ್ಲಿ ಬಳಸಲಾಗಿರುವ 'ಆಜಿಸಿದಳ್' ಪದಕ್ಕೆ ಬದಲಾಗಿ 'ಅಟಿಸಿದಳ್' ಪಾಠವನ್ನು ಇಟ್ಟು ಅರ್ಥೈಸಿದ್ದಾರೆ. ಪದ್ಯ ಹೀಗಿದೆ :

ಜಳಧಿಯೊಳಾದ ಮುತ್ತುಗಳವೇಂ ಪೊಸತಾದುವೆ ನಿನ್ನ ತೋಳ ಬಾ
ಳೊಳಿ ಬಲ ಗರ್ವದಿಂ ತೆಗೆದುದಗ್ರ ವಿರೋಧಿ ಮದೇಭ ಮಸ್ತಕ
ಸ್ಥಳ ಜಳರಾಶಿಯೊಳ್ ಬಳೆದ ನಿರ್ಮಳ ನಿರ್ವ್ರಣ ವೃತ್ತಮೌಕ್ತಿಕಾ
ವಳಿಮನೆ ತರ್ಪುದೆಂದು ನುಡಿದಟ್ಟಿಜಿಯೊಳಾಱಿಸಿದಳ್ ನಿಜೇಶನಂ

ವಿ. ವಿ. ಆ 10 ; ಪದ್ಯ 46

ಈ ಪ್ರಸಕ್ತ ಪದ್ಯದಲ್ಲಿ ನಾಲ್ಕನೆ ಪಾದದಲ್ಲಿ 'ನುಡಿದು ಅಟ್ಟಿಜಿಯೊಳ್ ಆಱಿಸಿದಳ್ ನಿಜೇಶನಂ—ಈ ಪದಗಳಲ್ಲಿ 'ಆಱಿಸಿದಳ್' ಎಂಬ ಪಾಠ ವಿಚಾರ ಯೋಗ್ಯವಾಗಿದೆ ಎಂದು ಹೇಳಿ, ಮೂಲತಃ ಇದು 'ಆ[ಱಿ]ಸಿದಳ್' ಎಂದಿರಬೇಕೆಂದೂ, ಶಕಟರೇಫ ಕೈತಪ್ಪಿನಿಂದ 'ಱ' ಆಗುವುದು ಸುಲಭ ಸಹಜ ಎಂದೂ ಊಹಿಸಿ, ಅದರ ಖಚಿತತೆಗೆ ಹೀಗೆ ಸಮರ್ಥನೆ ಕೊಟ್ಟಿದ್ದಾರೆ.

'ಆಱಿಸು' ಎಂಬ ಪದಕ್ಕೆ (ದುಃಖ, ಕೋಪ, ಆಯಾಸ) ಶಮನ ಮಾಡು ಶಾಂತಗೊಳಿಸು, ಎಂಬ ಅರ್ಥವಿದೆ. ಆದರೆ ಇಲ್ಲಿ ಶಮನಗೊಳಿಸುವ ಕಾರ್ಯಾವೇನೂ ಇಲ್ಲವೆಂದೂ, 'ಆಱಿಸು' ಶಬ್ದಕ್ಕೆ 'ಸಂತೋಷಗೊಳಿಸು' ಎಂಬ ಅರ್ಥವಿದ್ದರೂ ಇದು ಅಪ್ರಸಿದ್ಧ, ವಿರಳ ಅರ್ಥವಾಗಿರುತ್ತದೆಂದೂ ಹೇಳಿ, 'ಆಱಿಸಿದಳ್' ಎಂಬ ಪಾಠಾಂತರವನ್ನು ಸ್ವೀಕರಿಸಿದರೆ ಪ್ರೀತಿಯಲ್ಲಿ ಮುಳುಗಿಸಿದಳು ಎಂದು ಅರ್ಥ ಸರಿಬರ ಬಹುದು ಎಂಬ ಸಲಹೆ ಕೊಟ್ಟಿದ್ದಾರೆ. ಆಯ್ತು,

ಈಗ ಒಂದು ವಿಚಾರ : 'ಇಲ್ಲಿ ಯಾವುದೇ ಪಾಠಾಂತರವಿಲ್ಲ' ಎಂಬ ಅವರ ಒಪ್ಪಿತ ಅಭಿಪ್ರಾಯ ಮೊದಲಿಗೆ ಗಮನಾರ್ಹವಾದುದು. 'ಅಱಿಸಿದಳ್' ಪದವನ್ನು ಅವರ ಸಲಹೆಯಂತೆ ಸ್ವೀಕರಿಸುವ ಮುನ್ನ 'ಆಱಿಸಿದಳ್' ಪದವನ್ನು ತ್ಯಜಿಸುವ ಅವಶ್ಯಕತೆಯ ಬಗ್ಗೆ ಚರ್ಚೆ ನಡೆಸಬಹುದು ಎನ್ನಿಸುತ್ತದೆ.

ಪ್ರಸಕ್ತ ಪಂ. ಭಾ. ದೀಪಿಕೆಯಲ್ಲಿ 'ಆಱಿಸಿದಳ್' ಎಂಬುದಕ್ಕೆ 'ಸಮಾಧಾನ ಪಡಿಸಿದಳು' ಎಂದು ಅರ್ಥೈಸಿರುವ ಡಿ.ಎಲ್.ಎನ್.ರ ಅರ್ಥ ಸಂದರ್ಭಕ್ಕೆ ಒಪ್ಪುವು ದಿಲ್ಲ ಎಂಬುದು ಸಿ.ಪಿ.ಕೆಯವರ ವಾದ. ಒಂದು ಪದದ ಅರ್ಥವನ್ನು ಖಚಿತ ಗೊಳಿಸುವ ಮೊದಲು ಬಳಸಲಾಗಿರುವ ಹಿನ್ನೆಲೆಯನ್ನು ನೋಡುವುದು ಸಾಮಾನ್ಯ ಪದ್ಧತಿ. ಧರ್ಮನಂದನನ ನಾಯಕತ್ವದಲ್ಲಿ ಮಾರನೆಯ ದಿನ ನಡೆಯಲಿರುವ ಕಾಳಗದ ಸುದ್ದಿಯನ್ನು ಪಡೆವಳರು ಬೀದಿ ಬೀದಿಯಲ್ಲಿ ಸಾರಿ ಹೇಳಿದಾಗ, ಪ್ರತಿಯೊಬ್ಬ ವೀರ ಭಟರು, ತಮ್ಮ ಶಕ್ತಿ ಸಾಮರ್ಥ್ಯಗಳನ್ನು, ಅಳಿದು ಸುರಿಯುವ ವೀರಾವೇಶದ ಮಾತುಗಳನ್ನು, ತಮ್ಮ ಹೆಂಡತಿಯರ ಮುಂದೆ ಹೊರ ಹಾಕುತ್ತಿರುವ ಸನ್ನಿವೇಶ ಇದು. ಈ ಮಾತುಗಳನ್ನು ಗಮನಿಸಬಹುದು : 'ಕಲಿತನಮಂ ಅಱಿಯೆನುಡಿದಂ'

'ವೀರಭಟನುದಾರ ವೀರರಸ ರಸಿಕನಾಗಿ' 'ವೀರಮುಮನ್ ಅಜಿಯೊಳ್ ಎನ್ನ ಅರಸಂಗೆ ತೋರುವೆಂ' 'ವೀರ ಗ್ರಹಗ್ರಸ್ತನಾಗಿ' 'ಜೋಳಮಸೆಂತುನೀಗುವೆಂ' ನಿಜ ಭುಜವಿಜಯಮುನಪ್ಪುಕೆಯ್ದು ನುಡಿದಂ'—ಹೀಗೆ ಆಶ್ವಾಸ 14 ಪದ್ಯ 39 ರಿಂದ 45ರ ವರೆಗೆ ಶೌರ್ಯ ಪ್ರದರ್ಶನದ ಮಾತುಗಳು ಕೆದರುವುದನ್ನು ಕಾಣುತ್ತೇವೆ. ಅವರವರ ಪತ್ನಿಯರೂ ತಮ್ಮ ಚದುರಿನ ನುಡಿಗಳನ್ನೂ, ಧೀರತೆಯನ್ನು ಪ್ರದರ್ಶಿಸಿ ನುಡಿಯುವುದೂ ಇದೇ ಸನ್ನಿವೇಶದಲ್ಲಿ ಕಾಣಬರುತ್ತದೆ. ಈಗ 46ನೇ ಪದ್ಯ ಅಂತಹದೇ ಸಂದರ್ಭವೊಂದು : "ಮತ್ತೊರ್ವಳ್ ತನ್ನಾಣ್ಮನ ದೋರ್ವಲದ ಅಗುರ್ವಂ ನಚ್ಚಿ ಮೇಲಿನ 10.46ನೇ ಪದ್ಯವನ್ನು ನುಡಿಯುತ್ತಾಳೆ.

ವೀರಾವೇಶದಿಂದ ಮಾತಾಡುವ ಈ ಸನ್ನಿವೇಶದಲ್ಲಿ ತನ್ನ ವೀರಪತಿಯ ದೋರ್ವಲದ ಭಯಂಕರತೆ, ಉಗ್ರತೆಯ ಬಗ್ಗೆ ನಂಬಿಕೆ ಇರುವ ವೀರಸತಿಯೊರ್ವಳು ಅದಕ್ಕೆ ತಕ್ಕ ವೀರ ನುಡಿಗಳನ್ನು ಆಡುತ್ತಾಳೆ. "ಸಮುದ್ರದ ಮುತ್ತುಗಳನ್ನು ಆಯ್ದು ತರುವುದೇನೂ ಹೊಸ ಕಾರ್ಯವಲ್ಲ ; ತೋಳ ಬಾಳೊಳೆ ಬಲಗರ್ವದಿಂದ ಮದೇಭ ಮಸ್ತಕವೆಂಬ ಸಾಗರದಲ್ಲಿ ಬಳೆದ ಮುತ್ತುಗಳ ರಾಶಿಯನ್ನು ತರುವುದು ಆತನ ಶೌರ್ಯಕ್ಕೆ ತಕ್ಕ ಕಾರ್ಯ"- ಎಂದು ಪ್ರಚೋದಿಸಿ ಮಾತಾಡುತ್ತಾ, ನಿಜೇಶನದೋರ್ವಲದ ಅಗುರ್ವಂ ಅಟ್ಟುಜಿಸೊಳ್ ಆಜಿ ಸಿದಳ್ ಎಂದು ಅನ್ವಯಮಾಡಬಹುದು. ಇಲ್ಲಿ ತೋಳು ಬಲದಲ್ಲಿ ನಂಬಿಕೆ ಇರುವುದರಿಂದಲೇ ಮಹತ್ತರವಾದ ವೀರ ಕಾರ್ಯಸಾಧಿಸಲು ತನ್ನ ಪತಿ ಸಿದ್ಧವಾಗಬೇಕೆಂದು ಹೊಗಳುತ್ತಾ ಪ್ರೀತಿಯಮಾತಿನಿಂದಲೇ ಅವನನ್ನು ತಣಿಸಿದಳು ; ಸಾಂತ್ವನ ಗೊಳಿಸಿದಳು : ಎನ್ನುವ ಈ ಅರ್ಥದಲ್ಲಿ 'ಸಮಾಧಾನ ಪಡಿಸಿದಳು' ಎಂಬ ಅರ್ಥವನ್ನು ಡಿ.ಎಲ್.ಎನ್. ಒಪ್ಪಿರುವುದು ಸೂಕ್ತವೆನ್ನಿಸದೇ ಇಲ್ಲ. ಇದೇ ಸಂದರ್ಭದಲ್ಲಿ 'ಅಜಿ' ಎಂಬುದಕ್ಕೆ 'ತೃಪ್ತಿ' 'ತಣಿ' ಎಂಬ ಅರ್ಥವಿರುವುದರಿಂದ ಈ ಮೇಲಿನ ಅರ್ಥವೇ ಸರಿಯಾದುದೆಂದೂ ಹೇಳಬಹುದು. ಇಲ್ಲಿ ಪ್ರೀತಿಯಲ್ಲಿ ಮುಳುಗಿಸುವ ಶೃಂಗಾರ ಸನ್ನಿವೇಶ ಇದಲ್ಲ ಎಂದೂ ಹೇಳಲು ಅಡ್ಡಿ ಇಲ್ಲ ಎನ್ನಿಸುತ್ತದೆ.

ಇದಕ್ಕೆ ಪೋಷಕವಾಗಿ 'ಸಿಪಿಕೆ'ಯವರೇ ಸಮರ್ಥನೆಗೆ ಕೊಟ್ಟಿರುವ ಆ 4 : 17ನೇ ಪದ್ಯದ ಸನ್ನಿವೇಶವನ್ನು ಗಮನಿಸಬಹುದು. "ಮದನಲತೆಯೆಂಬ ನಾಗಕನ್ಯೆ, ಕಣ್ಬೇಟಂಗೊಂಡು, ನಾಗಲೋಕದ ವಿಲಾಸಂಗಳಂ ತೋರುತ್ತುಂ......ನಾಗವಿಭೂಷಣ ಪ್ರತತಿ, ನಾಗರಖಂಡಮು ಅಪೂರ್ವಮಪ್ಪ ಪುನ್ನಾಗದ ಬಾಸಿಗಂ......ನಾಗಲೋಕ ವಿಭವಂಗಳೊಳ್ ಅಜಿಸಿ ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್" ಎಂಬಲ್ಲಿ ನಾಗಲೋಕದ ವೈಭವಗಳಲ್ಲಿ ಮುಳುಗಿಸುವ ಶೃಂಗಾರದ ಸನ್ನಿವೇಶದ ಕ್ರಿಯೆಯೂ, ವೀರತನದ ಮಾತಾಡಿ ನಿಜೇಶನನ್ನು ಪ್ರಚೋದಿಸಿ ಪ್ರೀತಿಯಿಂದ ಮುಳುಗಿಸುವ ಸನ್ನಿವೇಶದ ಕ್ರಿಯೆಯೂ ಒಂದೇ ಆಗಿರಲಾರದು. ಎಂದಮೇಲೆ 'ಆಟಿಸಿದಳ್' ಸಮಯೋಚಿತವಾದ ಪಾಠಾಂತರವಲ್ಲ; 'ಆಜಿಸಿದಳ್' ಪಂಪನ ಪಾಠವೇ ಸೂಕ್ತವಾದುದೆಂದು ಹೇಳಬಹುದು ಎನ್ನಿಸದೇ ಇಲ್ಲ.

– ೨ –

**'ದೆ' ಅಥವಾ 'ಗೆ'– ಒಂದು ಪ್ರತಿಕ್ರಿಯೆ**

ಇದೇ ಸಾಧನೆ 19 ಸಂಪುಟದ 3-4ನೇ ಸಂಚಿಕೆಯು ಮಂಥನದಲ್ಲಿ ಬಂದಿರುವ ಎಂ.ವಿ. ಸತ್ಯನಾರಾಯಣರವರ ಲೇಖನದಲ್ಲಿ ಚರ್ಚೆಗೆ ಒಳಗಾಗಿರುವ ಪದ್ಯ : ವಿ.ವಿ. ಆ 12 ; ಪದ್ಯ 56. ಹೀಗಿದೆ.

> ನುಡಿವುದಂ ಪತಿಭಕ್ತಿಯು ಪೆಂಪಿಂ ನೀಂ ನುಡಿದೈ ಪೆಱತಂದದಿಂ
> ನುಡಿದೆಯಲ್ತೆ ಮದಾಯಮುಮೋಘಂ ಸೂಟ್ಪಡೆಯಲ್ಕೆನಗಕ್ಕುಮಿ
> ನ್ನೆಡೆಯೊಳೆಂದೆಮದೆಂದುದದೇಂ ತಪ್ಪಾದುದೇ ನಮ್ಮೊವಜರ್ ಜಸಂ
> ಬಡೆದ ಭಾರ್ಗವರಪ್ಪುದಱಿಂದಂ ನಂಟರುಮಂಗಮಹೀಪತೀ.

ಈ ಪದ್ಯದಲ್ಲಿ ಎರಡು ಸಮಸ್ಯೆಗಳನ್ನು ಲೇಖಕರು ತಂದಿದ್ದಾರೆ.

1) ಎರಡನೆ ಪಾದದಲ್ಲಿ 'ಮದಾಯಂ ಅಮೋಘಂ'-ಎಂದಿರುವ ಮಾತು ಭೀಷ್ಮರಾಡಿದುದೇ, ಅಥವಾ ಕರ್ಣನಾಡಿದುದೇ ಎಂಬುದು. ಭೀಷ್ಮನೇ ಆಡಿರುವ ಈ ಮಾತಿನಲ್ಲಿ 'ಸ್ವಹೊಗಳಿಕೆ' ಇರುವುದರಿಂದ, ಅವರ ವ್ಯಕ್ತಿತ್ವಕ್ಕೆ ಇದು ಶೋಭೆ ತರುವಂತಹದಲ್ಲ, ಎಂಬ ಸಂದೇಹವನ್ನು ಡಿ. ಎಲ್. ಎನ್. ರವರು ದೀಪಿಕೆಯಲ್ಲಿ ವ್ಯಕ್ತಪಡಿಸಿದ್ದಾರೆ. ಇದನ್ನೇ ಎಂ. ವಿ. ಸತ್ಯನಾರಾಯಣ ಅವರು ಒಪ್ಪಿರುತ್ತಾರೆ.
2) ಡಿ.ಎಲ್.ಎನ್‌ರವರ ಈ ಸಂದೇಹ ಪರಿಹಾರಾರ್ಥವಾಗಿ ಲೇಖಕರು ಇಲ್ಲಿ ಪಂಪನ ಪದ್ಯವನ್ನೇ ಬದಲಾಯಿಸ ಹೊರಟು, ಪದ್ಯದ ಮೂರನೆ ಪಾದದ ಏಳನೆ ಅಕ್ಷರವಾದ 'ದೆ' ಅಕ್ಷರವನ್ನು 'ಗೆ' ಎಂದು ತಿದ್ದಿ, ನಂತರ "ಮದಾಯಂ... ಎಮಗೆ ಎಂದುದು" ವರೆಗಿನ ಮಾತನ್ನು ಕರ್ಣನು ಆಡಿದಂತೆ ಅನ್ವಯಿಸಿದರೆ ಈ ಮೊದಲ ಸಮಸ್ಯೆ ಪರಿಹಾರವಾಗುತ್ತದೆ ಎಂದು ತೋರಿಸಿದ್ದಾರೆ. ಅವರು ಸಾಧನೆ 208ನೇ ಪುಟದಲ್ಲಿ ತೋರಿಸಿರುವ ಅನ್ವಯ ಕ್ರಮದ ಪದ್ಯದ ಸಾಲು ಹೀಗಿದೆ. ಮೊದಲೆರಡು ಪಾದಗಳನ್ನು ಹಾಗೇ ಉಳಿಸಿಕೊಂಡು, ಮೂರನೆ ಪಾದವನ್ನು ತಿದ್ದಿದರೆ "ಇನ್ನು ಎಡೆಯೊಳ್ ಸೂಟ್ ಪಡೆಯಲ್ಕೆ ಎನಗೆ ಅಕ್ಕುಂ, ಎಂದು ಎಮಗೆ ಎಂದುದು ಅದೇಂ ತಪ್ಪಾದುದೇ'. -ಇದು ಸರಿಯಾಗುತ್ತದೆ ಎನ್ನುತ್ತಾರೆ.

ಈ ಬದಲಾವಣೆ ಸಾಧುವಾದುದಲ್ಲ; ಸೂಕ್ತವೂ ಅಲ್ಲ; ಉಚಿತವೂ ಅಲ್ಲ ಎಂದು ನನಗೆ ಅನ್ನಿಸುತ್ತದೆ. ಪದ್ಯದಲ್ಲಿ ಯಾವ ಬದಲಾವಣೆಗೂ ಅವಕಾಶವಿಲ್ಲದಂತೆ ಬರೆದಿರುವ ಪಂಪನನ್ನು ಅರ್ಥಮಾಡಿಕೊಳ್ಳುವುದು ಸೂಕ್ತ. ಇಲ್ಲಿ ಬಂದಿರುವ ಸಮಸ್ಯೆ ಭೀಷ್ಮರ ಆತ್ಮ ಪ್ರಶಂಸೆ; ಇದು ಅನುಚಿತ ಕಲ್ಪನೆ ಎಂದೇ ಹೇಳಲು ನಾನು ಪ್ರಯತ್ನಿಸುತ್ತೇನೆ.

ಈಗ, ಒಂದು ಪ್ರಸಿದ್ಧ ಪದ್ಯವೊಂದನ್ನು ನೆನಪಿಸಿಕೊಳ್ಳಬಹುದು.

ಪಿಡಿಯೆಂ ಚಕ್ರಮನೆಂಬ ಚಕ್ರಿಯುನಿಳಾಚಕ್ರಂ ಭಯಂಗೊಳ್ವಿನಂ
ಪಿಡಿಯಿಪ್ಪೆಂಕರಚಕ್ರಮಂ ..... ......

—ವಿ. ವಿ. ಅ. 9: ಪದ್ಯ 25

ಎಂದೂ ಕೆಚ್ಚೆದೆಯಿಂದ ಕರ್ಣನಿಗೆ ಉತ್ತರಿಸಿ, ಮಹಾಪ್ರತಿಜ್ಞಾರೂಢನಾದ ಭೀಷ್ಮನ ಈ ಮಾತುಗಳು 'ಆತ್ಮ ಪ್ರಶಂಸೆ' ಎಂದು ವಿದ್ವಾಂಸರು ತೀರ್ಮಾನಿಸುವುದಾದರೆ ಮೇಲೆ ಹೇಳಿದ ಆ 12-ಪದ್ಯ 56ರಲ್ಲಿ ಆಡಿದ 'ಮದಾಯಂ ಅಮೋಘಂ' ಎಂಬ ಹಿಂದೆ ನಡೆದ ಘಟನೆಯ ನೆನಪು ಮಾಡುವ ವಾಕ್ಯ ಭೀಷ್ಮರ ಆತ್ಮಪ್ರಶಂಸೆಯಾಗುವುದು ನಿಶ್ಚಯವಾಗುತ್ತದೆ.

ಮತ್ತೊಂದು ಪ್ರಸಿದ್ಧ ಪದ್ಯದ ಸಾಲುಗಳು :

'ಕಲಿತದನದ ಉರ್ಕು ಜವ್ವನದ ಸೊರ್ಕು.........
.........ಸಿಲ್ಕಿಪ್ಪುದೆಯುಲಪ್ಪುದು ಕಾಣ ಮಹಾಜಿರಂಗದೊಳ್'

—ವಿ. ವಿ. ಅ 10: ಪದ್ಯ 23

ಎಂದು, ಕರ್ಣನ ಸೊಕ್ಕಿನ ಮಾತುಗಳಿಗೆ ಉತ್ತರಿಸಿದವರು ಭೀಷ್ಮ. ಇದು ಕಾಲೋಚಿತ ಭವಿಷ್ಯ ನುಡಿ. ಆದರೆ ಈ ಮಾತನ್ನು ಕರ್ಣನೆ ಹೇಳಿದಂತೆ ಅನ್ವಯಿಸಿ ಹೇಳಬೇಕಾದ ಪ್ರಯತ್ನ ಅನಾವಶ್ಯಕ ಹಾಗೂ ಭೀಷ್ಮರ ಆತ್ಮಪ್ರಶಂಸೆಯ ಸಂದೇಹ ದೋಷದ ಪರಿಹಾರಕ್ಕಾಗಿ ಪಂಪನಿಗೆ ಅನ್ಯಾಯವಾಗಬಾರದೆಂದೇ ಈ ಪದ್ಯಕ್ಕೆ ಹೀಗೆ ಅನ್ವಯ ಅರ್ಥ ಹೇಳಲು ಪ್ರಯತ್ನಿಸುತ್ತೇನೆ.

ಕೃಷ್ಣನ ಕೈಯಲ್ಲಿ ಚಕ್ರಹಿಡಿಸುವ ಸಾಮರ್ಥ್ಯ, ಅರ್ಜುನನ ರಥವನ್ನು 'ಕುರುಕ್ಷೇತ್ರದಿಂ ಪಡುವಣ್ಣಾವುದ' ದೂರಕ್ಕೆ 'ತೂಳು'ವ ಸಾಮರ್ಥ್ಯಗಳನ್ನು ತೋರಿಸಲು ವೀರಾವೇಶದಿಂದ ಪ್ರತಿಜ್ಞೆ ಮಾಡಿದ್ದ ಭೀಷ್ಮರು ತಾವು ಅಂದು ಹಾಗೆ ನುಡಿದದ್ದು ಸತ್ಯವೆಂದು ಹೇಳಿಕೊಳ್ಳುವುದರಲ್ಲಿ 'ಆತ್ಮ ಪ್ರಶಂಸೆ'ಗೆ ಅವಕಾಶವೇ ಇಲ್ಲ ಎನ್ನಿಸುತ್ತದೆ. "ಆ ದಿನ ನೀನು ಹಾಗೆ ಮಾತಾಡಿದ್ದಕ್ಕೆ ನಾನು ಹೀಗೆ ಹೇಳಿದ್ದೆ. ಇಬ್ಬರದೂ ತಪ್ಪಿಲ್ಲ" ಎಂದು ನೆನಪು ಮಾಡುವ ಸಂದರ್ಭ ಇದು.

ಈಗ ಪದ್ಯವನ್ನು ಮತ್ತೊಮ್ಮೆ ನೋಡೋಣ.

"ನುಡಿವುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ,
ಪೆಱತು ಅಂದದಿಂ ನುಡಿದೆಯಲ್ತೆ;" 1
"ಮದಾಯಂ ಅಮೋಘಂ, ಸೂಱ್ ಪಡೆಯಲ್ಕೆ ಎನಗಕ್ಕುಂ
ಇನ್ನೆಡೆಪೊಳ್ ಎಂದೆವ್, ಅದು, ಎಂದುದು ಅದೇಂ ತಪ್ಪಾದುದೇ" 2
"ನಮ್ಮೊವಜರ್ ಜಸಂ ಬಡೆದ ಭಾರ್ಗವರಪ್ಪುದರಿಂದು ನಂಟರುಂ
ಅಂಗಾಧಿಪತಿ" 3

ಈ ಮೂರು ವಾಕ್ಯಗಳಲ್ಲಿ 1 ಮತ್ತು 2, ತಮಗೆ ಪಟ್ಟಕಟ್ಟುವ ಸಂದರ್ಭದಲ್ಲಿ ಕರ್ಣ ನುಡಿದ ಮಾತುಗಳನ್ನೂ ತಾವು ಉತ್ತರಿಸಿದ ಬಗೆಯನ್ನು ನೆನಪು ಮಾಡುತ್ತಾರೆ ಭೀಷ್ಮ. 3ರ ರಲ್ಲಿ ತಮ್ಮಿಬ್ಬರ ನಡುವೆ ಆತ್ಮೀಯತೆ ಇರಬೇಕಾದುದರ ಸಾಕ್ಷಿಯಾಗಿ ಸಂಬಂಧ ಕಲ್ಪಿಸಲು, ಅವನಿಗೆ ಬೆನ್ನು ತಟ್ಟಲು ಮಾಡುವ ಪ್ರಯತ್ನವಾಗಿದೆ.

ಇಷ್ಟು ಸ್ಪಷ್ಟವಾದ ಅರ್ಥವಿರುವಲ್ಲಿ, ಕರ್ಣನ ಮಾತಿನಲ್ಲಿ ದುಡುಕು ಸ್ವಭಾವ ವನ್ನು ಕಾಣುವುದಾಗಲೀ, ಭೀಷ್ಮರ ಕೆಚ್ಚೆದೆಯ ಮಾತುಗಳನ್ನು ಕರ್ಣನಿಗೆ ಆರೋಪಿಸಿ ಅನ್ವಯಿಸುವುದಾಗಲಿ, ನಿರ್ಭಿಡೆಯಿಂದ ಆಡಿದ ಶೌರ್ಯದ ಮಾತಿಗೆ ಆತ್ಮಪ್ರಶಂಸೆಯ ಸಂದೇಹವನ್ನು ಶೋಧಿಸುವುದಾಗಲೀ ಅನಾವಶ್ಯಕ ಎನ್ನಿಸುತ್ತದೆ.

ಕೊನೆಯದಾಗಿ ಒಂದು ಮಾತು "ನಿನ್ನನೇ ನಚ್ಚಿದಂ ಕುರುಮಹೀಪತಿ, ನಿನ್ನ ಶರಾಳಿಗಳ್ಗೆ ಮುನ್ನನ್ನಡುಗುತ್ತುಮಿರ್ಪುದು ಅರಿ............ (ಆ 12: ಪದ್ಯ 57, ಮುಂದಿನ ಪದ್ಯ)

ಎಂದು, (ಮುಂದಿನ ಪದ್ಯದಲ್ಲೇ) ಮತ್ತೊಬ್ಬರ ಶೌರ್ಯವನ್ನು ತುಂಬು ಮನಸ್ಸಿನಿಂದ ಹೊಗಳಿ, ಹುರಿದುಂಬಿಸುವ ಉದಾತ್ತ ಸ್ವಭಾವವುಳ್ಳ ಗಾಂಗೇಯನಲ್ಲಿ ಆತ್ಮ ಪ್ರಶಂಸೆಯ ಸ್ವಭಾವ ಕಾಣಬರಲಾರದು ಎಂದ ಮೇಲೆ, ಆ ಕಾರಣವಾಗಿ ಮೂಲ ಪದ್ಯವನ್ನು ಬದಲಾಯಿಸುವ ಪ್ರಯತ್ನಸಲ್ಲ, ಎಂದು ಹೇಳಬಯಸುತ್ತೇನೆ.

—ಎಚ್: ವಿ. ಶ್ರೀನಿವಾಸಶರ್ಮ

## ಶಬ್ದಮಣಿದರ್ಪಣ – ಪ್ರಯೋಗದ ಆಕರ

ಶಬ್ದಮಣಿದರ್ಪಣ ; 66ನೇ ಸೂತ್ರ:
"ಅವಿಕೃತಿಗಳೆವರ್ಣವೊವರ್ಣಮ್ ... ಪ್ಲುತಕ್ಕಮಭಾವಂ"

ಈ ಸೂತ್ರದಲ್ಲಿ 'ಅವಧಾರಣೆ'ಗೆ ಕೊಟ್ಟಿರುವ ಕೇಶಿರಾಜನ ಪ್ರಯೋಗವಿದು :

ನುಡಿದನೆ ಕಾವುದನೇ ಎರ್ದೆ
ಗಿಡದಿರು ಜವನಿಟ್ಟರಕ್ಕೆ ನಿನಗೀವುದನೇಂ
ನುಡಿದನೊ ಏ ಅದು ಕಯ್ಯದು
ನುಡಿಯದು ತಪ್ಪುಗುಮೆ ಗಂಗಚೂಡಾಮಣಿಯಾ - 5

(ಕಾ. ಲೋ.)

ಈ ಪ್ರಯೋಗ ಕಂದ ಪದ್ಯ ಶಾಸನ ಪದ್ಯಮಂಜರಿಯಲ್ಲಿ 10 ಶ್ರವಣಬೆಳಗೊಳ 59. ಕಾಲ 974ರ ಶಾಸನದಲ್ಲಿ 19ನೇ ಪದ್ಯದಲ್ಲಿ ಸಿಗುತ್ತದೆ.

ಶಾಸನಪದ್ಯಕ್ಕೂ, ಶಬ್ದಮಣಿದರ್ಪಣದ ಆಕರ ಪದ್ಯಕ್ಕೂ ವ್ಯತ್ಯಾಸವಿರುವುದು, ಮೂರನೆ ಪಾದದಲ್ಲಿ ಮಾತ್ರ ಎಂಬುದನ್ನು ತಿಳಿಯಬಹುದು.

3ನೇ ಪಾದ : ಶ. ದ : ನುಡಿದನೊ ಏ ಅದು ಕಯ್ಯದು (ಕಾ. ಲೋ)
ಶಾಸನ : ನುಡಿದನೆ ಏ ಅದು ಕೆಯ್ಯದು. (ಶಾಸನ)

ಎಚ್. ವಿ. ಶ್ರೀನಿವಾಸಶರ್ಮ

**'ದೆ' ಅಥವಾ 'ಗೆ' ? ಅಲ್ಲ 'ಮ' ಅಥವಾ 'ಯ' ?**

ಪಂಪಭಾರತದ 12-56 ನೇ ಪದ್ಯದ ಬಗ್ಗೆ ಸಂಪುಟ 19, ಸಂಚಿಕೆ 3-4 ರಲ್ಲಿ ಎಂ. ವಿ. ಸತ್ಯನಾರಾಯಣ ಅವರು ಈ ವೃತ್ತದ ಮೂರನೇ ಪಾದದ ಐದನೆಯ 'ದೆ' ಅಕ್ಷರಕ್ಕೆ ಬದಲಾಗಿ [ಗೆ] ಎಂದು ತಿದ್ದಿ ಓದಿಕೊಳ್ಳಿ ಎಂದು ಊಹಾಪಾಠವನ್ನು ಕಲ್ಪಿಸಿ ಅದರಂತೆ ಇಡೀ ಪದ್ಯಕ್ಕೆ ಅನ್ವಯಾರ್ಥವನ್ನು ಕೊಟ್ಟಿರುವುದು ಸರಿಯಷ್ಟೆ. ಆದರೆ ಇದಕ್ಕೆ ನನ್ನ ಆಕ್ಷೇಪಣೆ ಉಂಟು, ಏನೆಂದರೆ 'ದೆ' ಗೆ ಬದಲಾಗಿ [ಗೆ] ಎಂದು ತಿದ್ದಿ ಓದಿಕೊಳ್ಳುವುದಕ್ಕಿಂತ ಆರನೆಯ ಅಕ್ಷರ 'ಮ' ವನ್ನು [ಯ] ಆಗಿ ತಿದ್ದಿ ಓದಿಕೊಳ್ಳಬೇಕು. ಯಾಕೆಂದರೆ :

1. ಬಹುಶಃ ಮೂಲಪಾಠ 'ಎಂದಯ್' ಎಂದೇ ಇದ್ದಿರಬೇಕು. ಲಿಪಿಕಾರನ ಅಥವಾ ಮುದ್ರಣಕಾರನ ಕೈತಪ್ಪಿನಿಂದ ಏನಾದರೂ ದೋಷ ಸಂಭವಿಸಿರಬೇಕು. ಇಲ್ಲಿ 'ದೆ' ಯನ್ನು 'ಗೆ' ಮಾಡುವುದಕ್ಕಿಂತ 'ಯ' ವನ್ನು 'ಮ' ಮಾಡಿರುವುದು ಹೆಚ್ಚು ಸಂಭವನೀಯ.

2. ಇದೇ ಪದ್ಯದ ಮೊದಲೆರಡು ಸಾಲುಗಳಲ್ಲಿ 'ನುಡಿದೈ' 'ನುಡಿವೆಯಲ್ತೆ' ಎಂದು ಹಳಗನ್ನಡದ 'ಅಯ್' ಪ್ರತ್ಯಯವನ್ನು ಬಳಸಿದ ಕವಿ ಇದಕ್ಕಿದ್ದಂತೆ ಅದಕ್ಕೆ ಬದಲಾಗಿ ನಡುಗನ್ನಡದ 'ಉ' ಪ್ರತ್ಯಯವನ್ನು ಮೂರನೇ ಸಾಲಿನಲ್ಲಿ ಬಳಸಲಾರ. ಒತ್ತು, ಅವಧಾರಣೆ 'ಎಂದೆ' ಎಂಬುದರಲ್ಲಿ ಸಾಧಿತವಾಗುವುದಿಲ್ಲ, ಇದು ಪಂಪನ ಜಾಯಮಾನವೂ ಅಲ್ಲ.

3. ಭೀಷ್ಮನು ತನಗೆ ತಾನೇ 'ಎಮಗೆ' ಎಂದು ಬಹುವಚನವನ್ನು ಆರೋಪಿಸಿಕೊಳ್ಳುವ ಮಾನೋನ್ನತನಲ್ಲ. [ನೋಡಿ : ಕಲಿತನದುರ್ಕು ಜವ್ವನದಸೊರ್ಕು ನಿಜೇಶನನಚ್ಚುಮಿಕ್ಕತೋಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತು ಏನೆನಗುಂಟೆ ? 10-23]

4. 'ಮ' ಗೆ ಬದಲಾಗಿ [ಯ] ಎಂಬ ಕಲ್ಪಿತ ಪಾಠ ನನ್ನದೇ ಅಲ್ಲ, ಈ ಹಿಂದೆಯೇ ಡಾ|| ವರದರಾಜರಾವ್ ಅವರು ತಮ್ಮ ವಿಮರ್ಶನ ಕೃತಿ 'ಸಾಹಿತ್ಯ ಸಾನ್ನಿಧ್ಯ' ದಲ್ಲಿ ಇದೇ ಪಾಠವನ್ನು ಕಲ್ಪಿಸಿ ಇಟ್ಟುಕೊಂಡಿರುತ್ತಾರೆ.

5. ಮೈಸೂರು ವಿ. ವಿ. ನಿಲಯವು ಪ್ರಕಟಿಸಿರುವ 1977ರ ಆವೃತ್ತಿಯಲ್ಲಿ ಇದೇ 12-56 ಪದ್ಯದ ಮೂರನೇ ಸಾಲಿನ ಆರನೆಯ ಅಕ್ಷರಕ್ಕೂ ಮತ್ತು ಏಳನೆಯ ಅಕ್ಷರಕ್ಕೂ ಮಧ್ಯೆ 'O' ಅನುನಾಸಿಕ ಇರುವುದು ಗಮನಾರ್ಹ. ಹಿಂದೆ ನಾನು ಬಳಸಿಕೊಂಡಿದ್ದ ಅದೇ ಮೈಸೂರು ವಿ. ವಿ. ನಿಲಯದ 1973 ರ ಆವೃತ್ತಿಯಲ್ಲಾಗಲಿ ; ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರಕಟಣೆ (ಸಂ. ಎಂ. ವಿ. ಸೀ) ಯಲ್ಲಾಗಲಿ 'O' ಅನುನಾಸಿಕ ಸ್ವರವು ಇಲ್ಲ. ಈ ಪಾಠವನ್ನೇ ನಾವು ಸ್ವೀಕರಿಸಿದರೂ ಕೂಡ, ಎಂದೈ + ಅಂದು + ಎಂದುದು + ಅದೇಂ + ತಪ್ಪಾದುದೆ ? = ಎಂದು ಹೇಳಿದೆ (ನೀನು) ಅದಿನ, ಆ ಹೇಳಿದ್ದು, ಅದೇನು ತಪ್ಪಾಯಿತೆ ? ಎಂದು ಭೀಷ್ಮನು ಕರ್ಣನನ್ನು ಕೇಳುತ್ತಾನೆ. ["ಮದಾಯಮಮೋಘಂ ಸೂಟ್ಟಿಡೆಯಲ್ಕೆನಗಕ್ಕುಮಿನ್ನೆಡೆಯೊಳ್" + ಎಂದಯ್ + ಅಂದೆಂದುದು + ಅದೇಂ ತಪ್ಪಾದುದೆ ? ಇದು ಪಾಠ]

6. 'ಮ' ಕ್ಕೆ ಬದಲಾಗಿ [ಯ] ಪಾಠವನ್ನು ಇಟ್ಟುಕೊಂಡು ನಾನು ಬಹಳ ಹಿಂದೆಯೇ 12-56ನೆ ಪದ್ಯಕ್ಕೆ ಸಾಧನೆ (ಸಂಪುಟ - 5, ಸಂಚಿಕೆ-2, 1976) ಯಲ್ಲಿ 'ಪಂಪಭಾರತದ ಒಂದು ಕ್ಲಿಷ್ಟಪದ್ಯ' ಎಂದು ಅನ್ವಯಾರ್ಥವನ್ನು ಕೊಟ್ಟಿರುತ್ತೇನೆ. ಸತ್ಯನಾರಾಯಣ ಅವರ ಈಚಿನ ಅನ್ವಯಾರ್ಥವೂ ಕೂಡ ಸ್ವಲ್ಪ ವ್ಯತ್ಯಾಸದೊಂದಿಗೆ ನನ್ನದರಂತೆಯೇ ಇದೆ, ಇನ್ನೂ ಹೆಚ್ಚಿನ ವಿವರಗಳಿಗೆ ಆ 'ಸಾಧನೆ'ಯನ್ನು ಗಮನಿಸಿ ಎಂದು ಸೂಚಿಸ ಬಯಸುತ್ತೇನೆ.

ಶಿವರಾಮಯ್ಯ

 

## ಈ ಸಂಚಿಕೆಯ ಲೇಖಕರು


| | |
|---|---|
| ದೊಡ್ಡರಂಗೇಗೌಡ | ಕನ್ನಡ ಪ್ರವಾಚಕ<br>ಶ್ರೀ ಲ. ನ. ಕಲೆ ಮತ್ತು ವಾಣಿಜ್ಯ<br>ವಿದ್ಯಾಲಯ, ಕೋಟೆ<br>ಬೆಂಗಳೂರು–560 002 |
| ಡಾ॥ ಮ. ಸು. ಕೃಷ್ಣಮೂರ್ತಿ | ಪ್ರಾಧ್ಯಾಪಕರು<br>ಹಿಂದಿ ವಿಭಾಗ, ಮಾನಸ ಗಂಗೋತ್ರಿ<br>ಮೈಸೂರು–570 006 |
| ಡಾ॥ ಎಂ. ಬಿ. ನೇಗಿನಹಾಳ | ಆಡಳಿತಾಧಿಕಾರಿಗಳು<br>ಕ. ವಿ. ವಿ. ಸ್ನಾತಕೋತ್ತರ ಕೇಂದ್ರ<br>ಬೆಳಗಾಂ–590 001 |
| ಡಾ॥ ಶಾಂತಿನಾಥ ಎ ದಿಬ್ಬದ | ಮುಖ್ಯಸ್ಥರು<br>ಕನ್ನಡ ವಿಭಾಗ<br>ಗುಲ್ಬರ್ಗಾ ಸ್ನಾತಕೋತ್ತರ ಕೇಂದ್ರ<br>ಸಂಡೂರು, ಹೊಸಪೇಟೆ ತಾ॥<br>ಬಳ್ಳಾರಿ ಜಿಲ್ಲೆ |
| ಕುಮಾರಿ ಅಂದನೂರು ಶೋಭ | ಉಪ ನಿರ್ದೇಶಕರು<br>ಅಂಚೆ ತೆರಪಿನ ಶಿಕ್ಷಣ<br>ಸೆಂಟ್ರಲ್ ಕಾಲೇಜು<br>ಬೆಂಗಳೂರು–560 001 |
| ಡಾ॥ ಎನ್. ವಿ. ವಿಮಲ | ಸಹಾಯಕ ಸಂಪಾದಕರು<br>ಪ್ರಸಾರಾಂಗ<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು–560 056 |
| ಡಾ॥ ಹಂಪ. ನಾಗರಾಜಯ್ಯ | ಪ್ರಾಧ್ಯಾಪಕರು<br>ಕನ್ನಡ ಅಧ್ಯಯನ ಕೇಂದ್ರ<br>ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು–560 056 |

| | |
|---|---|
| ಡಾ॥ ಕಮಲಾ ಹಂಪನಾ | 1079, 18 ಎ ಮೇನ್<br>5ನೇ ಬ್ಲಾಕು, ರಾಜಾಜಿನಗರ<br>ಬೆಂಗಳೂರು–560 010 |
| ಡಾ॥ ಅರವಿಂದ ಮಾಲಗತ್ತಿ | ಮುಖ್ಯಸ್ಥರು<br>ಕನ್ನಡ ವಿಭಾಗ<br>ಮಂಗಳೂರು ವಿಶ್ವವಿದ್ಯಾನಿಲಯ<br>ಕೊಣಾಜೆ, ಮಂಗಳೂರು (ದ. ಕ.) |
| ಡಾ॥ ಮ. ನ. ಜವರಯ್ಯ | ಕನ್ನಡ ಅಧ್ಯಯನ ಸಂಸ್ಥೆ<br>ಮಾನಸ ಗಂಗೋತ್ರಿ<br>ಮೈಸೂರು–570 006 |
| ಎಸ್. ಶಿವಣ್ಣ | ಸಂಪಾದಕರು<br>ಕನ್ನಡ ಅಧ್ಯಯನ ಕೇಂದ್ರ<br>ಜ್ಞಾನಭಾರತಿ<br>ಬೆಂಗಳೂರು–560 056 |
| ಶ್ರೀನಿವಾಸ ಶರ್ಮ | ಕನ್ನಡ ವಿಭಾಗ<br>ಎಂ.ಇ.ಎಸ್. ಕಾಲೇಜು<br>ಮಲ್ಲೇಶ್ವರಂ, ಬೆಂಗಳೂರು–560 003 |
| ಶಿವರಾಮಯ್ಯ | ಕನ್ನಡ ವಿಭಾಗ<br>ಸರ್ಕಾರಿ ಕಲಾ ಕಾಲೇಜು<br>ಬೆಂಗಳೂರು–560 001 |
| ಡಾ॥ ವಿಲ್ಯಂ ಮಾಡ್ತ | ಪ್ರಾಧ್ಯಾಪಕರು<br>ಕನ್ನಡ ಅಧ್ಯಯನ ಪೀಠ<br>ಧಾರವಾಡ–580 003 |

